# ಶ್ರೀ ಕೃಷ್ಣ ಆಲನಹಳ್ಳಿಯವರ ಕಥಾ ಸಾಹಿತ್ಯ

(ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಕನ್ನಡ ಎಂ.ಫಿಲ್.ಪದವಿಗಾಗಿ ಸಲ್ಲಿಸಿರುವ ಸಂಶೋಧನಾ ನಿಬಂಧ)


ಸಂಶೋಧನಾ ವಿದ್ಯಾರ್ಥಿ

**ನಂದಿನಿ ಕೆ.ಎನ್.**

ಮಾರ್ಗದರ್ಶಕರು

**ಡಾ. ಪಿ. ಬೆಟ್ಟೇಗೌಡ**

ಕನ್ನಡ ಸಹ ಪ್ರಾಧ್ಯಾಪಕರು

ಸರ್ಕಾರಿ ಮಹಿಳಾ ಪ್ರಥಮ ದರ್ಜೆ ಕಾಲೇಜು

ವಿಜಯನಗರ, ಮೈಸೂರು





ಕರ್ನಾಟಕ ಸಂಘ (ರಿ) ಮಂಡ್ಯ

ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ

ಕನ್ನಡದ ವಿಶ್ವವಿದ್ಯಾನಿಲಯ, ಹಂಪಿಯಿಂದ ಮಾನ್ಯತೆ ಪಡೆದಿದೆ

೨೦೧೩-೨೦೧೪

# ಶ್ರೀ ಕೃಷ್ಣ ಆಲನಹಳ್ಳಿಯವರ ಕಥಾ ಸಾಹಿತ್ಯ

(ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಕನ್ನಡ ಎಂ.ಫಿಲ್.ಪದವಿಗಾಗಿ ಸಲ್ಲಿಸಿರುವ ಸಂಶೋಧನಾ ನಿಬಂಧ)


ಸಂಶೋಧನಾ ವಿದ್ಯಾರ್ಥಿ

**ನಂದಿನಿ ಕೆ.ಎನ್.**

ಮಾರ್ಗದರ್ಶಕರು

**ಡಾ. ಪಿ. ಬೆಟ್ಟೇಗೌಡ**

ಕನ್ನಡ ಸಹ ಪ್ರಾಧ್ಯಾಪಕರು

ಸರ್ಕಾರಿ ಮಹಿಳಾ ಪ್ರಥಮ ದರ್ಜೆ ಕಾಲೇಜು

ವಿಜಯನಗರ, ಮೈಸೂರು





ಕರ್ನಾಟಕ ಸಂಘ (ರಿ) ಮಂಡ್ಯ

ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ

ಕನ್ನಡದ ವಿಶ್ವವಿದ್ಯಾನಿಲಯ, ಹಂಪಿಯಿಂದ ಮಾನ್ಯತೆ ಪಡೆದಿದೆ

೨೦೧೩–೨೦೧೪

# ಮಾರ್ಗದರ್ಶಕರ ದೃಢೀಕರಣ ಪತ್ರ

೨೦೧೩–೨೦೧೪ನೇ ಸಾಲಿನಲ್ಲಿ ನಂದಿನಿ ಕೆ.ಎನ್. ಎಂಬ ಎಂ.ಫಿಲ್. ವಿದ್ಯಾರ್ಥಿಯು ಈ ಪರೀಕ್ಷೆಯ ಅಂಗವಾಗಿ "ಶ್ರೀ ಕೃಷ್ಣ ಆಲನಹಳ್ಳಿಯವರ ಕಥಾ ಸಾಹಿತ್ಯ" ಎಂಬ ವಿಷಯ ಕುರಿತು ನನ್ನ ಮಾರ್ಗದರ್ಶನದಲ್ಲಿ ಸಂಶೋಧನಾ ನಿಬಂಧವನ್ನು ಸಿದ್ಧಪಡಿಸಿರುತ್ತಾರೆ. ಇದನ್ನು ಇವರು ಈ ಮೊದಲೇ ಯಾವುದೇ ಪದವಿ, ಡಿಪ್ಲೋಮೊ ಅಥವಾ ಪ್ರಶಸ್ತಿಗಾಗಿ ಯಾವುದೇ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿಲ್ಲ ಎಂದು ದೃಢೀಕರಿಸುತ್ತೇನೆ.

ದಿನಾಂಕ: ೧೧.೦೨.೨೦೧೪.

ಸ್ಥಳ: ಮೈಸೂರು.

ಮಾರ್ಗದರ್ಶಕರ ಸಹಿ

ಡಾ. ಪಿ. ಬೆಟ್ಟೇಗೌಡ

ಕನ್ನಡ ಸಹ ಪ್ರಾಧ್ಯಾಪಕರು

ಸರ್ಕಾರಿ ಮಹಿಳಾ ಪ್ರಥಮ ದರ್ಜೆ ಕಾಲೇಜು

ವಿಜಯನಗರ, ಮೈಸೂರು

# ಸಂಶೋಧಕರ ಪ್ರಮಾಣಪತ್ರ

ಹಂಪಿ ಕನ್ನಡ ವಿಶ್ವವಿದ್ಯಾನಿಲಯದಿಂದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘ ನಡೆಸುತ್ತಿರುವ ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರದಲ್ಲಿ ೨೦೧೩-೨೦೧೪ನೇ ಸಾಲಿಗೆ ಕನ್ನಡ ಎಂ.ಫಿಲ್. ಅಧ್ಯಯನದ ಅಂಗವಾಗಿ ಸಂಶೋಧನಾ ನಿಬಂಧ ರಚಿಸಲು **"ಶ್ರೀ ಕೃಷ್ಣ ಆಲನಹಳ್ಳಿಯವರ ಕಥಾ ಸಾಹಿತ್ಯ"** ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು ಡಾ. ಪಿ. ಬೆಟ್ಟೇಗೌಡ ರವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧವನ್ನು ರಚಿಸಿರುತ್ತೇನೆ.

ಈ ನಿಬಂಧವನ್ನಾಗಲೀ, ಈ ನಿಬಂಧದ ಯಾವುದೇ ಅಧ್ಯಯನವನ್ನಾಗಲೀ ಯಾವುದೇ ಪದವಿ, ಡಿಪ್ಲೋಮೊ ಅಥವಾ ಪ್ರಶಸ್ತಿಗಾಗಿ ಯಾವುದೇ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿಲ್ಲ ಎಂದು ದೃಢೀಕರಿಸುತ್ತೇನೆ. ಕನ್ನಡ ವಿಶ್ವವಿದ್ಯಾನಿಲಯವು ನೀಡುವ ಎಂ.ಫಿಲ್. (ಕನ್ನಡ) ಪದವಿಗಾಗಿ ಈ ನಿಬಂಧವನ್ನು ಒಪ್ಪಿಸುತ್ತಿದ್ದೇನೆ.

ನಂದಿನಿ ಕೆ.ಎನ್.

ದಿನಾಂಕ: ೧೧-೦೨-೨೦೧೪

ಸ್ಥಳ: ಮಂಡ್ಯ.

ಸಂಶೋಧನಾ ವಿದ್ಯಾರ್ಥಿ
ನಂದಿನಿ ಕೆ.ಎನ್.
ರಿ. ನಂ. **KRSMKS-00700**
ಕನ್ನಡ ವಿಭಾಗ
ಕರ್ನಾಟಕ ಸಂಘ (ರಿ) ಮಂಡ್ಯ
ಎಂ.ಎಲ್. ಶ್ರೀಕಂಠೇಶಗೌಡ
ಸಂಶೋಧನಾ ಕೇಂದ್ರ

# ಪರಿವಿಡಿ

## ಉದ್ದೇಶ:

ದೈನಂದಿನ ಜೀವನದಲ್ಲಿ ಮಾನವ ಕೈಗೊಳ್ಳುವ ಪ್ರತಿಯೊಂದು ಕೆಲಸದ ಹಿಂದೆ ಒಂದು ಗುರಿ, ಉದ್ದೇಶ ಮತ್ತು ಧ್ಯೇಯ ಇದ್ದೇ ಇರುತ್ತದೆ, ಇರಲೇಬೇಕು. ಏಕೆಂದರೆ ಗುರಿ ಇಲ್ಲದ ಜೀವನ ಅಂಬಿಗನಿಲ್ಲದ ಹರಿಗೋಲಿನಂತೆ ನಿರರ್ಥಕ. ಉದ್ದೇಶವಿಲ್ಲದೆ ಮಾಡುವ ಕೆಲಸ ಯಶಸ್ಸುಗಳಿಸುತ್ತದೆಂದು ಹೇಳಲಾಗುವುದಿಲ್ಲ. ಗಳಿಸಿದರೂ ಅದು ಮೌಲಿಕವಾದ ಯಶಸ್ಸಾಗುವುದಿಲ್ಲ. ಸದುದ್ದೇಶ ಇಟ್ಟುಕೊಂಡು ವಿಸ್ತರಿಸಿ ನಡೆದರೆ ಆಯ್ದುಕೊಂಡ ವಿಚಾರದಲ್ಲಿ ಆಸಕ್ತಿ ಹೆಚ್ಚಾಗಿ ಅರಿವಿನ ಎಲ್ಲೆಯೂ ವಿಸ್ತರಿಸಿ, ನಮ್ಮ ಕಾರ್ಯ ಪ್ರಮಾಣಾತ್ಮಕ ಮತ್ತು ಪರಿಣಾಮಾತ್ಮಕವೂ ಆಗುವಂತೆ ಮಾಡುತ್ತದೆ. ಆದುದರಿಂದ ನಾವು ಏನೇ ಕೈಗೊಂಡರೂ ಒಂದು ಉದ್ದೇಶವಿರಲೇಬೇಕು.

ಶ್ರೀಕೃಷ್ಣ ಆಲನಹಳ್ಳಿಯವರ ಕಥಾಸಾಹಿತ್ಯ ಎಂಬ ಅಧ್ಯಯನವನ್ನು ಪ್ರಸ್ತುತ ಕೈಗೊಳ್ಳಲಾಗಿದೆ. ಇವರ ಸಾಹಿತ್ಯದ ಬಗೆಗೂ ಸಾಕಷ್ಟು ಅಧ್ಯಯನಗಳೂ, ವಿಮರ್ಶೆಗಳೂ ಆಗಿದೆ ಉದಾಹರಣೆಗೆ: ನಾಗಭೂಷಣ ಡಿ.ಎಸ್. ರವರ ಕಾಡಿನ ಹುಡುಗ ಕೃಷ್ಣ, ದೇ.ಜ.ಗೌ. ರವರ ಪುಸ್ತಕ ಪ್ರಪಂಚ, ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಕಟಿಸಿರುವ ಸಂಸ್ಕೃತಿಯ ಸ್ಥಿತ್ಯಂತರ ಮತ್ತು ಶ್ರೀಕೃಷ್ಣ ಆಲನಹಳ್ಳಿಯವರ ಸಾಹಿತ್ಯ, ಯು.ಆರ್. ಅನಂತಮೂರ್ತಿಯವರ ಸಮಕ್ಷಮ ಇತ್ಯಾದಿ. ಹೀಗೆ ಈ ವಿಷಯದ ಬಗೆಗೆ ಸಾಕಷ್ಟು ಅಧ್ಯಯನಗಳು ವಿಮರ್ಶಾ ಲೇಖನಗಳು ಬಂದಿವೆಯಾದರೂ ಇಂತಹ ಒಬ್ಬ ಸೃಜನಶೀಲ, ಪ್ರಮುಖ ಸಾಹಿತಿಯ ಸಾಹಿತ್ಯದ ಮೇಲೆ ಸಾಕಷ್ಟು ಗಂಭೀರ ಅಧ್ಯಯನದ ಅವಶ್ಯಕತೆ ಇರುವುದರಿಂದ ಅವರ ಸಾಹಿತ್ಯವನ್ನು ಹೊಸ ದೃಷ್ಟಿಕೋನದಿಂದ, ವಿಭಿನ್ನವಾಗಿ ನೋಡುವ ಉದ್ದೇಶವನ್ನಿಟ್ಟುಕೊಂಡು ಈ ಪ್ರಬಂಧವನ್ನು ಬರೆಯುತ್ತಿದ್ದೇನೆ. ವ್ಯಕ್ತಿ ವಿಚಾರದ ಮಿತಿಯನ್ನು ಹೊರತು ಉಳಿದಂತೆ ಸಾಕಷ್ಟು ವಿವರವಾದ ಚರ್ಚೆಯನ್ನು ಮಾಡಲಾಗಿದೆ. ಇದುವರೆಗಿನ ಅಧ್ಯಯನಗಳೂ, ವಿಮರ್ಶೆಗಳೂ ತಲುಪಿರುವ ನೆಲೆಗಳನ್ನು ಸಾಧ್ಯವಾದ ಮಟ್ಟಿಗೆ ಗ್ರಹಿಸಿಕೊಂಡು ಅವುಗಳ ಮುಂದುವರಿಕೆ ಇದಾಗುವಂತೆ ನೋಡಿಕೊಳ್ಳಲಾಗಿದೆ.

ಸಾಹಿತ್ಯ ಎನ್ನುವುದು ಜೀವನ ದೃಷ್ಟಿ ಮತ್ತು ಅನುಭವಗಳನ್ನು ಅಭಿವ್ಯಕ್ತಗೊಳಿಸುವ ಶಬ್ದ ಮಾಧ್ಯಮ. ಈ ಅಭಿವ್ಯಕ್ತಿಗೆ ಸಹೃದಯರನ್ನು ತಲುಪುವ ಮುಖ್ಯ ಉದ್ದೇಶ ಇರುತ್ತದೆ. ಸಾಹಿತಿಯು ತನ್ನ ಅನುಭವಕ್ಕೆ ದೊರೆತ, ನೋಡಿದ ಮತ್ತು ಕೇಳಿದ ವಿಷಯಗಳನ್ನು ತನ್ನದಾಗಿಸಿಕೊಂಡು ಜೀವನ ದೃಷ್ಟಿಯನ್ನು ರೂಪಿಸುವ ಬಹುಮುಖ್ಯ ಮಾಧ್ಯಮ ಸಾಹಿತ್ಯ.

ಕನ್ನಡ ಸಾಹಿತ್ಯ ಚರಿತ್ರೆಯನ್ನು ಗಮನಿಸಿದಾಗ ವಿಪುಲವಾದ, ವೈವಿಧ್ಯವಾದ ಸಾಹಿತ್ಯ ರಾಶಿಯೇ ನಮ್ಮ ಮುಂದಿರುವುದನ್ನು ಕಾಣುತ್ತೇವೆ. ಅದೇ ರೀತಿ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ದುಡಿದಿರುವ ಪ್ರತಿಭಾವಂತ ಲೇಖಕರಾದ ಆಲನಹಳ್ಳಿಯವರ ಸಾಹಿತ್ಯದ ಬಗ್ಗೆ ಗಂಭೀರವಾದ ಅಧ್ಯಯನ ನಡೆಸುವುದು

ನಮ್ಮ ಸಾಂಸ್ಕೃತಿಕ ಜವಾಬ್ಧಾರಿಯಾಗಿದೆ. ಸುಮಾರು ಕಾಲು ಶತಮಾನಗಳ ಕಾಲ ತಮ್ಮ ಅವಿರತ ಶ್ರಮ ಹಾಗೂ ತೀವ್ರಾಸಕ್ತಿಯಿಂದ

ಸಾಹಿತ್ಯ ಕೃಷಿಯನ್ನು ಮಾಡಿದ ಶ್ರೀಕೃಷ್ಣ ಆಲನಹಳ್ಳಿಯವರು ಬೆರಗುಗೊಳಿಸುವಂತಹ ಸಾಹಿತ್ಯವನ್ನು ಸೃಷ್ಟಿಸಿ ಇನ್ನೂ ಅಗಾಧವಾದುದನ್ನು ಸಾಧಿಸಬೇಕೆಂಬ ಮನಸ್ಥಿತಿಯಲ್ಲಿದ್ದಾಗಲೇ ಅಕಾಲಮರಣಕ್ಕೆ ತುತ್ತಾದದ್ದು ತುಂಬಾ ನೋವಿನ ಸಂಗತಿಯಾಗಿದೆ.

ಮೌಲಿಕವಾದುದು ಯಾವುದೇ ಭಾಷೆಯಲ್ಲಿರಲಿ, ಅದು ಕನ್ನಡಕ್ಕೆ ಬರಬೇಕು. ಸತ್ವಯುತವಾದ ಕನ್ನಡ ಬರಹ ಕೂಡ ಅನ್ಯಭಾಷೆಗೆ ಅನುವಾದವಾಗಬೇಕು ಎಂದು ಆಲನಹಳ್ಳಿಯವರು ಸದಾ ಹಂಬಲಿಸುತ್ತಿದ್ದರು. "ಜರ್ಮನಿಯ ಪ್ರಸಿದ್ಧ ವಿದ್ವಾಂಸರಾದ ಪ್ರೊ. ಲೊಠಾರ್ಸ್ ಲೂಟ್ಸೆ ಅವರು ೧೯೭೨ ರಲ್ಲಿ ಭಾರತಕ್ಕೆ ಬಂದಾಗ ಕನ್ನಡದ ಪ್ರಮುಖ ಬರಹಗಾರರನ್ನು ಭೇಟಿಮಾಡಿ ವಿಚಾರ ವಿನಿಮಯ ನಡೆಸುತ್ತಾರೆ. ಆಗ ಅವರು ಯುವಬರಹಗಾರರಾಗಿದ್ದ ಆಲನಹಳ್ಳಿಯವರನ್ನು ಕುರಿತು ತುಂಬು ಅಭಿಮಾನದ ಮಾತುಗಳನ್ನು ಆಡುತ್ತಾರೆ"[೨].[೧] ಒಬ್ಬ ವಿದೇಶೀ ಲೇಖಕ ಯಾವುದೇ ಪೂರ್ವಗ್ರಹಪೀಡಿತನಾಗದೆ, ಆಲನಹಳ್ಳಿಯವರ ಸತ್ವ ಹಾಗೂ ವ್ಯಕ್ತಿತ್ವವನ್ನು ಕುರಿತಂತೆ "ಕನ್ನಡ ಸಾಹಿತ್ಯದಲ್ಲಿ ಬರುತ್ತಿರುವ ಮರಿ ಆನೆ" ಎಂದು ವರ್ಣಿಸಿರುವುದು ತುಂಬ ಗಮನಾರ್ಹವಾದ ಸಂಗತಿಯಾಗಿದೆ.

ಇವರು ಪ್ರೌಢಶಾಲೆಯಲ್ಲಿದ್ದಾಗಲೇ ಸಾಹಿತ್ಯದ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ. ಆ ಕಾಲಕ್ಕೆ ಸಣ್ಣಪುಟ್ಟ ಪದ್ಯಗಳನ್ನು ಬರೆಯುವ ಹವ್ಯಾಸವನ್ನು ಬೆಳೆಸಿಕೊಂಡು 'ಗೋಕುಲ', 'ಕೈಲಾಸ' ಮುಂತಾದ ಪತ್ರಿಕೆಗಳಲ್ಲಿ 'ಶ್ರೀಕೃಷ್ಣ ಆಲನಹಳ್ಳಿ' ಎಂಬ ಕಾವ್ಯನಾಮದಲ್ಲಿ ಕವಿತೆಗಳನ್ನು ಬರೆಯುತ್ತಾ ಮುಂದೆ ಅದೇ ಹೆಸರಿನಲ್ಲಿ ಪ್ರಸಿದ್ಧರಾಗುತ್ತಾರೆ. ಇವರ ಪ್ರಾರಂಭದ ಬರಹಗಳು ಪ್ರಮುಖವಾಗಿ ಭಾವುಕ ಸ್ಥಿತಿಯಲ್ಲಿರುತ್ತಿದ್ದವು. ಇವರ ಕವಿತೆಗಳನ್ನು ಗಮನಿಸಿದ ಹಿರಿಯ ಬರಹಗಾರರು ಈತನ ಶಕ್ತಿಯನ್ನು ಕಂಡು ಪ್ರೋತ್ಸಾಹಿಸಿದರು. ನಂತರ ಕುವೆಂಪು, ಪು.ತಿ.ನ., ಬೇಂದ್ರೆ, ಕಾರಂತ, ಮಾಸ್ತಿ ಮುಂತಾದ ಹಿರಿಯ ಬರಹಗಾರರನ್ನು ಆಳವಾಗಿ ಅಧ್ಯಯನ ನಡೆಸಿದಂತೆ ಅಡಿಗ, ಅನಂತಮೂರ್ತಿ, ಚಿತ್ತಾಲ, ತೇಜಸ್ವಿ, ಕಾರ್ನಾಡ್ ಮುಂತಾದ ಹೊಸ ಲೇಖಕರನ್ನು ಆಳವಾಗಿ ಅಧ್ಯಯನ ಮಾಡಿ ಸಾಹಿತ್ಯದ ಆಳ ಅಗಲಗಳನ್ನು ಅರಿತುಕೊಂಡು ತಾವೇ ಸ್ವತಃ ಪ್ರತಿಭಾವಂತರಾಗಿ ಅವರೆಲ್ಲರಿಗಿಂತಲೂ ವಿಭಿನ್ನವಾಗಿಯೇ ಬೆಳೆದದ್ದು ಮಹತ್ವವೆನಿಸುತ್ತದೆ.

ಈ ಎಲ್ಲದರ ಪರಿಣಾಮವಾಗಿ ಮಹಾರಾಜ ಕಾಲೇಜಿನಲ್ಲಿ ಬಿ.ಎ. ವಿದ್ಯಾರ್ಥಿಯಾಗಿದ್ದಾಗಲೇ ೧೯೬೬ರಲ್ಲಿ "ಮಣ್ಣಿನ ಹಾಡು" ಎಂಬ ಕವನ ಸಂಕಲನವನ್ನು ಹೊರತಂದರು. ಇದು ಪ್ರಕಟಗೊಳ್ಳುವ ಮುಂಚೆ 'ಸಂಕ್ರಮಣ','ಸಾಕ್ಷಿ' ಮುಂತಾದ ಸಾಹಿತ್ಯ ಪತ್ರಿಕೆಗಳಲ್ಲಿ ಕವಿತೆಗಳ ಮೂಲಕ ಆಲನಹಳ್ಳಿಯವರು ಕನ್ನಡ ಸಾಹಿತ್ಯ ಲೋಕಕ್ಕೆ ಪರಿಚಯವಾಗಿದ್ದರು. 'ಮಣ್ಣಿನ ಹಾಡು' ಸಂಕಲನವು ಆ ವರ್ಷದ ಸಾಹಿತ್ಯ

ಅಕಾಡೆಮಿಯ ಬಹುಮಾನವನ್ನು ಗಳಿಸಿತು. ಕನ್ನಡ ಸಾಹಿತ್ಯದಲ್ಲಿ ಆ ಹೊತ್ತಿಗೆ ಆಳವಾದ ಅಧ್ಯಯನದಿಂದ ಹೆಸರುಗಳಿಸಿದ್ದ ಲೇಖಕರಾದ ಶ್ರೀ ಎಚ್.ಎಂ. ಚನ್ನಯ್ಯ ಮತ್ತು ಶ್ರೀ ಜಿ. ಎಚ್. ನಾಯಕ ಅವರನ್ನು ಸಲಹೆಗಾರರನ್ನಾಗಿ ಮಾಡಿಕೊಂಡು 'ಸಮೀಕ್ಷಕ' ಎಂಬ ದ್ವೈಮಾಸಿಕ ಸಾಹಿತ್ಯ ಪತ್ರಿಕೆಯನ್ನು ಆಲನಹಳ್ಳಿಯವರು ತಮ್ಮ ಸಂಪಾದಕತ್ವದಲ್ಲಿ ಹೊರತಂದರು.

ಆಲನಹಳ್ಳಿಯವರು ಕವಿತೆಯನ್ನು ಬರೆಯುವ ಮೂಲಕ ಕನ್ನಡ ಸಾಹಿತ್ಯವನ್ನು ಪ್ರವೇಶಿಸಿ ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲೂ ತಮ್ಮ ಸೃಜನಶೀಲ ಬರಹದಿಂದ ವಿಭಿನ್ನ ಸಾಹಿತ್ಯ ರಚನೆಗೆ ಮುಂದಾದವರು. ಇಂತಹ ವ್ಯಕ್ತಿಯ ಸಾಹಿತ್ಯವನ್ನು ವಿಭಿನ್ನ ನೆಲೆಗಳಲ್ಲಿ ನೋಡುವುದು ನನ್ನ ಅಧ್ಯಯನದ ಉದ್ದೇಶವಾಗಿದೆ.

## ವ್ಯಾಪ್ತಿ:

ಯಾವುದೇ ವಿಷಯ ವಸ್ತುವನ್ನೊಳಗೊಂಡ ಕೃತಿಯಾಗಲೀ ಅದರದೇ ಆದ ಚೌಕಟ್ಟನ್ನು ಹೊಂದಿರುತ್ತದೆ. ಕಲಾಕೃತಿಯ ಅಚ್ಚುಕಟ್ಟುತನ ಈ ಚೌಕಟ್ಟನ್ನು ಹಾಕಿಕೊಳ್ಳುವುದರ ಮೂಲಕ ಸಾಧ್ಯವಾಗುತ್ತದೆ. ಇತಿಹಾಸದ ವಸ್ತುವಾಗಲೀ, ಸಾಮಾಜಿಕ ವಸ್ತುವಾಗಲೀ, ರಾಜಕೀಯ ವಸ್ತುವಾಗಲೀ ಕಲಾವಿದನ ಬರವಣಿಗೆಗೆ ಒಳಪಟ್ಟಾಗ ಸಹಜವಾಗಿಯೇ ಕಲಾ ಲಕ್ಷಣದ ಚೌಕಟ್ಟಿಗೆ ಒಳಗಾಗುತ್ತದೆ. ಈ ಕಲಾತತ್ವ ಪಾಲಿಸದೆ ಯಾವ ಕಥೆ, ಕಾವ್ಯವೂ ಇರಲಾರದು. ಹಾಗೆಯೇ ಪ್ರಸ್ತುತ ಕವಿಯ ಸಾಹಿತ್ಯ ರಚನೆಯನ್ನು ಬರೆಯುವಲ್ಲಿ ವಸ್ತುನಿಷ್ಟ ತತ್ವದೊಂದಿಗೆ ವ್ಯಕ್ತಿನಿಷ್ಟ ತತ್ವಗಳಿಗೂ ಇಲ್ಲಿ ಸ್ಥಾನಕೊಡಲಾಗಿದೆ.

ಆಲನಹಳ್ಳಿಯವರು ಕಥೆಗಳನ್ನು ಬರೆಯಲು ತೊಡಗಿದ್ದು ೧೯೬೬-೬೭ರ ಸುಮಾರಿಗೆ 'ಎತ್ತಣ ಮಾಮರ ಎತ್ತಣ ಕೋಗಿಲೆ' ಅವರ ಮೊದಲ ಕಥೆಯಾಗಿದೆ. ಈ ಕಥೆಯು ೧೯೭೦ರಲ್ಲಿ ಪ್ರಕಟವಾದ ಅವರ ಮೊದಲ ಕಥಾ ಸಂಕಲನ 'ತಪ್ತ' ಕೃತಿಯಲ್ಲಿ 'ಸಂಬಂಧ' ಎಂಬ ಹೆಸರಿನಲ್ಲಿ ಪ್ರಕಟವಾಗಿದೆ. ಮಲೆಯಾಳಂ ಭಾಷೆಗೆ 'ಸಂಪತ್ತನ್' ಎಂಬ ಹೆಸರಿನಲ್ಲಿ .ಅನುವಾದಗೊಂಡಿತು. 'ತಪ್ತ' ಕಥಾ ಸಂಕಲನದಲ್ಲಿ 'ತಪ್ತ', 'ತೊರೆ', 'ಸಂಬಂಧ', 'ಸೀಮಂತ', 'ಹುತ್ತ', 'ಆಗಂತುಕ', 'ಶ್ರಾವಣ', 'ನೆಲಗುಮ್ಮ' ಎಂಬ ಎಂಟು ಕಥೆಗಳಿವೆ. ನಂತರ 'ಕಾಡುಗಿಡದ ಹಾಡುಪಾಡು' ಎಂಬ ಕವನ ಸಂಕಲನವು ೧೯೭೪ರಲ್ಲಿ ಹೊರಬಂದಿತು. ಆಲನಹಳ್ಳಿಯವರು ನಿರಂತರವಾದ ದುಡಿಮೆಯಿಂದ ಹಲವಾರು ಕೃತಿಗಳನ್ನು ಪ್ರಕಟಿಸಿದರು. ಇದರ ಫಲವೆಂಬಂತೆ ೧೯೭೫ರಲ್ಲಿ 'ಫೀನಿಕ್ಸ್' ಎಂಬ ಎರಡನೇ ಕಥಾಸಂಕಲನ ಹೊರಬಂದಿತು. ಈ ಕೃತಿಯಲ್ಲಿ 'ಫೀನಿಕ್ಸ್', 'ಗೀಜಗನಗೂಡು', 'ಇನ್ನೊಂದು ಪ್ರಣಯ ಪ್ರಸಂಗ' ಮತ್ತು 'ಅಂಟಿದ ನಂಟಿನ ಕೊನೆ ಬಲ್ಲವರಾರು' ಎಂಬ ನಾಲ್ಕು ಕಥೆಗಳಿವೆ. ಮೊದಲ ಕಥಾ ಸಂಕಲನವಾದ 'ತಪ್ತ'ದಂತೆಯೇ, 'ಫೀನಿಕ್ಸ್' ಕೂಡ ಜನಪ್ರಿಯತೆಯನ್ನು ಗಳಿಸಿದ ಕೃತಿಯಾಗಿದೆ.

ಆಲನಹಳ್ಳಿಯವರು ಕವಿಯಾಗಿ, ಕಥೆಗಾರರಾಗಿ ಕೆಲವು ಸಾರ್ಥಕ ಕಥೆ, ಕವನಗಳನ್ನು ಬರೆದಿರುವರಾದರೂ ಅವರ ಶ್ರೇಷ್ಠ ಪ್ರತಿಭೆ ಪೂರ್ಣ ಅಭಿವ್ಯಕ್ತಿಯನ್ನು ಪಡೆದಿರುವುದು ಅವರ ಕಾದಂಬರಿಗಳಲ್ಲಿ ಅವರ ನಿಜವಾದ

ಸಾಹಿತ್ಯಕ ಬದುಕು ಸಾರ್ಥಕವಾಗಿರುವುದು ಈ ಪ್ರಕಾರದಲ್ಲೆ ಇವರು ಮೂರು ಕಾದಂಬರಿಗಳನ್ನು ಬರೆದಿದ್ದಾರೆ. ಅವುಗಳೆಂದರೆ 'ಕಾಡು'(೧೯೭೧) ಮೊದ'ಲ ಕಾದಂಬರಿ. 'ಪರಸಂಗದ ಗೆಂಡೆತಿಮ್ಮ' (೧೯೭೪) ಎರಡನೇ ಕಾದಂಬರಿ. 'ಭುಜಂಗಯ್ಯನ ದಶಾವತಾರಗಳು' (೧೯೮೩) ಮೂರನೇ ಕಾದಂಬರಿ. ಇವುಗಳಲ್ಲದೇ ಇನ್ನೆರಡು ಕಾದಂಬರಿಗಳನ್ನು ಬರೆದಿರುವರಾದರೂ ಅವುಗಳು ಕೃತಿರೂಪದಲ್ಲಿ ಬಂದಿಲ್ಲ. ಅವುಗಳಲ್ಲಿ 'ಗೋಡೆ' ಎಂಬ ಕಾದಂಬರಿಯು 'ಸುದ್ದಿ ಸಂಗಾತಿ' ವಾರಪತ್ರಿಕೆಯಲ್ಲಿ ೧೯೭೫ರಲ್ಲಿ ಧಾರಾವಾಹಿಯಾಗಿ ಹೊರಬಂತು. 'ಅರಗಿನ ಅರಮನೆ' ಎಂಬ ಮತ್ತೊಂದು ಅಪೂರ್ಣ ಕಾದಂಬರಿ 'ಲಂಕೇಶ ಪತ್ರಕೆ'ಯಲ್ಲಿ ಧಾರಾವಾಹಿಯಾಗಿ ೧೯೮೮ರಲ್ಲಿ ಪ್ರಕಟವಾಯಿತು. ಹಲವು ಬೃಹತ್ ಯೋಜನೆಯನ್ನು ಹೊಂದಿದ್ದ ಆಲನಹಳ್ಳಿಯವರು ಬದುಕಿದ್ದರೆ ಈ ಕಾರ್ಯಗಳೆಲ್ಲವನ್ನು ಖಂಡಿತವಾಗಿಯೂ ನೆರವೇರಿಸುತ್ತಿದ್ದರು. ಆದರೆ ಇವರು ೧೯೮೯ರಲ್ಲಿ ಅಕಾಲ ಮರಣಕ್ಕೆ ತುತ್ತಾದರು. ಕನ್ನಡ ಸಾಹಿತ್ಯ ಕ್ಷೇತ್ರ ಈ ಸಾವಿನ ಮೂಲಕ ಪ್ರತಿಭಾವಂತ ಬರಹಗಾರನೊಬ್ಬನನ್ನು ಕಳೆದುಕೊಂಡಿದ್ದು ತುಂಬಾ ನೋವಿನ ಸಂಗತಿಯಾಗಿದೆ.

ಒಬ್ಬ ಸಾಹಿತಿಯ ಕೃತಿಗಳ ಬಗ್ಗೆ ಅಧ್ಯಯನ ನಡೆಸುವಾಗ ಹಲವಾರು ವಿಧಾನಗಳನ್ನು ಅನುಸರಿಸಬಹುದು. ಒಂದು ಅವನ ಸಮಗ್ರ ಕೃತಿಗಳನ್ನು ಒಟ್ಟಿಗೆ ಅಧ್ಯಯನ ಮಾಡುವುದು, ಇನ್ನೊಂದು ಲೇಖಕನ ಸಾಹಿತ್ಯ ಸೃಷ್ಠಿಯಲ್ಲಿನ ಕೆಲವು ಕೃತಿಗಳಲ್ಲಿ ಲೇಖಕನ ಒಟ್ಟು ಸೃಜನಶೀಲ ಸಾಮರ್ಥ್ಯ ಹೇಗೆ ವ್ಯಕ್ತವಾಗಿದೆ? ಯಾವುದರಲ್ಲಿ ತನ್ನ ಔನ್ನತ್ಯವನ್ನು ಸಾಧಿಸಿದ್ದಾನೆ? ಅಥವಾ ಇಲ್ಲ, ಎಂಬುದು. ಆದ್ದರಿಂದ ನಾನು ಎರಡನೆಯ ವಿಧಾನವೇ ಹೆಚ್ಚು ಸೂಕ್ತವೆಂದು ಭಾವಿಸಿದ್ದೇನೆ. ಆಲನಹಳ್ಳಿಯವರು ಕಾವ್ಯ, ಕಥೆ, ಕಾದಂಬರಿ, ಅನುವಾದ, ವಿಮರ್ಶೆ, ಸಂಪಾದನೆ ಮುಂತಾದ ಸಾಹಿತ್ಯ ಪ್ರಕಾರಗಳಲ್ಲಿ ದುಡಿದಿದ್ದಾರೆ. ಆದರೆ 'ಶ್ರೀಕೃಷ್ಣ ಆಲನಹಳ್ಳಿಯುವರ ಕಥಾ ಸಾಹಿತ್ಯ' ಎಂಬ ವಿಷಯವನ್ನು ಅಧ್ಯಯನಮಾಡುತ್ತಿರುವುದರಿಂದ ಆಲನಹಳ್ಳಿಯವರ ಕಥೆಗಳು ಮತ್ತು ಕಾದಂಬರಿಗಳ ಬಗೆಗಿನ ವಿಶ್ಲೇಷಣೆಯನ್ನು ನನ್ನ ಪ್ರಬಂಧದಲ್ಲಿ ಮಂಡಿಸುತ್ತಿದ್ದೇನೆ.

ಇವರ ಕಥೆ, ಕಾದಂಬರಿಗಳ ಸತ್ವವೆಂದರೆ ಬಾಲ್ಯದಲ್ಲಿ ಕಂಡುಂಡ ದಟ್ಟವಾದ ಗ್ರಾಮೀಣ ಬದುಕಿನ ಅನುಭವದ ಸಾರವೇ ಆಗಿದೆ. ಶ್ರೀಕೃಷ್ಣರವರ ಕಥಾ ಸಾಹಿತ್ಯದಲ್ಲಿನ ಹಳ್ಳಿಯ ಜೀವನ ಚಿತ್ರಣ, ನಾಗರೀಕತೆ, ಜೀವನಶೈಲಿ, ಆಚಾರ-ವಿಚಾರ, ದಾಂಪತ್ಯ, ಜಾತೀಯತೆ, ಅಸಮಾನತೆ, ವರ್ಗ ಸಂಘರ್ಷ, ಶೋಷಣೆ, ಮಾನವೀಯ ಸಂಘರ್ಷ, ಪ್ರೀತಿ, ಪ್ರೇಮ, ಭಯ, ಕ್ರೌರ್ಯ, ಹಿಂಸೆ, ಮತ್ಸರ, ಯಾತನೆ, ಸಾವು-ನೋವುಗಳು, ಆಸೆ-ನಿರಾಸೆ, ತುಮುಲಗಳು, ಜಾತಿ, ಧರ್ಮ, ಮಡಿವಂತಿಕೆ, ಅಂತಸ್ತು, ವಯಸ್ಸು

ಮುಂತಾದ ಎಲ್ಲಾ ಅಂಶಗಳನ್ನೊಳಗೊಂಡ ಜೀವನ ವಿಧಾನದ ಚಿತ್ರಣಗಳನ್ನು ಈ ಕೆಳಗಿನ ಆರು ಅಧ್ಯಾಯಗಳು ಒಳಗೊಂಡಿದೆ.

ಮೊದಲನೇ ಅಧ್ಯಾಯದಲ್ಲಿ ಪ್ರಬಂಧದ ಉದ್ದೇಶ, ವ್ಯಾಪ್ತಿ ಕೊಟ್ಟಿದ್ದೇನೆ. ಎರಡನೇ ಅಧ್ಯಾಯದಲ್ಲಿ ಗ್ರಾಮೀಣ ಬದುಕಿನ ಚಿತ್ರಣವನ್ನು, ಮೂರನೇ ಅಧ್ಯಾಯದಲ್ಲಿ ಮನುಷ್ಯ ಸಂಘರ್ಷದ ಚಿತ್ರಣವನ್ನು ನಾಲ್ಕನೇ

ಅಧ್ಯಾಯದಲ್ಲಿ ಕಾಮ ಮತ್ತು ಕ್ರೌರ್ಯದ ಬಗೆಗೆ, ಐದನೇ ಅಧ್ಯಾಯದಲ್ಲಿ ಆಲನಹಳ್ಳಿಯವರ ಅಭಿವ್ಯಕ್ತಿಯ ವೈಶಿಷ್ಟ್ಯವನ್ನು, ಆರನೇ ಅಧ್ಯಾಯದಲ್ಲಿ ಇವರ ಕಥಾ ಸಾಹಿತ್ಯದಲ್ಲಿನ ಕಥಾವಸ್ತು ಮತ್ತು ಅವುಗಳ ವಿನ್ಯಾಸ ಹಾಗೂ ಇಡೀ ಪ್ರಬಂಧದ ಫಲಿತಾಂಶಗಳನ್ನೊಳಗೊಂಡಂತೆ ಉಪಸಂಹಾರ ಮಾಡಿದ್ದೇನೆ.

ಪ್ರಬಂಧದ ಅಂತ್ಯದಲ್ಲಿ ಇಡೀ ಪ್ರಬಂಧ ರಚನೆಗೆ ಬಳಸಿಕೊಂಡಿರುವ ಆಕರ ಹಾಗೂ ಪರಾಮರ್ಶನ ಗ್ರಂಥಗಳ ಪಟ್ಟಿಯನ್ನು ನೀಡಿದ್ದೇನೆ. ಇದರೊಂದಿಗೆ ಪ್ರಬಂಧದ ಎಲ್ಲ ಶಿಷ್ಟಾಚಾರಗಳು ಕೊನೆಗೊಂಡು ಪ್ರಬಂಧವನ್ನು ಪರಿಸಮಾಪ್ತಿಗೊಳಿಸಿದ್ದೇನೆ.

## ಅಡಿ ಟಿಪ್ಪಣಿಗಳು:

೧. ಕಾಡಿನ ಹುಡುಗ ಕೃಷ್ಣ : (ಸಂ) ಡಿ.ಎಸ್. ಭೂಷಣ ಮತ್ತು ಇತರರು ; ಪು. ೧೦೬, ೧೯೯೦.

ಶ್ರೀಕೃಷ್ಣ ಅವರ ಕಥೆಗಳಲ್ಲಿ ಹೆಚ್ಚಿನವು ಈ ಲೇಖಕರು ತಮ್ಮ ಬಾಲ್ಯದಲ್ಲಿ ಕಂಡುಂಡ ಗ್ರಾಮೀಣ ಬದುಕಿನ ಚಿತ್ರಣವನ್ನು ಕಲಾತ್ಮಕವಾಗಿ ನೀಡಿರುವುದನ್ನು ಗಮನಿಸಬಹುದು. ಹಾಗೆಯೆ ನಗರ ಹಾಗೂ ಗ್ರಾಮೀಣ ಬದುಕಿನ ವಿವರಗಳನ್ನು ಸಮಷ್ಠಿತಿಯಲ್ಲಿ ಹಿಡಿದಿಟ್ಟಿರುವುದನ್ನು ಕಾಣಬಹುದು. ಆದರೆ ಇವರ ಶ್ರೇಷ್ಠ ಕಥೆಗಳೆಲ್ಲವೂ ದಟ್ಟವಾದ ಗ್ರಾಮೀಣ ಬದುಕಿನ ವಿವರಗಳು ಹಾಗೂ ಇವರ ಬಾಲ್ಯದಲ್ಲಿ ಕಂಡುಂಡ ಘಟನೆಗಳನ್ನು ಸುತ್ತುವರಿದವುಗಳೇ ಆಗಿವೆ.

ಗ್ರಾಮೀಣ ಬದುಕಿನ ಹಿನ್ನೆಲೆಯಿಂದ ಬಂದ ಇವರ ಕಥಾನಾಯಕರುಗಳು ನಗರದಲ್ಲಿ ಓದಿ, ಪ್ರಬುದ್ಧವಾದ ವೈಚಾರಿಕತೆಯನ್ನು ರೂಢಿಸಿಕೊಳ್ಳುವ ಯತ್ನದಲ್ಲಿರುವವರು. ಬದುಕನ್ನು ವಾಸ್ತವದ ನೆಲೆಗಟ್ಟಿನಲ್ಲಿ ಅರ್ಥೈಸಲು ಪ್ರಯತ್ನಿಸುವ ಇವರು ಹೊಸ ಕಾಲದ ಹುಡುಗಿಯರ ಸೆಳೆತದಿಂದ ಆಕರ್ಷಿತರಾಗುತ್ತಾರೆ. ಆದರೆ ಇವರು ಬೆಳೆದು ಬಂದ ಪರಿಸರ ಹಾಗೂ ಕರುಳ ಬಳ್ಳಿಯ ಸಂಬಂಧ ಇವರನ್ನು ಅಷ್ಟು ಸುಲಭವಾಗಿ ಬಿಟ್ಟುಕೊಡಲಾರದು. ಹಾಗಾಗಿ ಇವರ ಕಥಾನಾಯಕರು ಸಂಪೂರ್ಣವಾಗಿ ಹಳೆಯದನ್ನು ತಿರಸ್ಕರಿಸಲಾರದ ಹೊಸದನ್ನು ಸಂಪೂರ್ಣ ಒಪ್ಪಲಾಗದ ಇಕ್ಕಟ್ಟಿಗೆ ಸಿಕ್ಕಿ ಯಾತನೆಯನ್ನು ಅನುಭವಿಸುವವರಾಗಿದ್ದಾರೆ.

ಆಲನಹಳ್ಳಿಯವರು ಗ್ರಾಮೀಣ ಭಾಗಗಳಲ್ಲಿ ಜಾತಿ ಪ್ರಜ್ಞೆ, ಜಾತಿ ತಾರತಮ್ಯ ಎಷ್ಟು ಗಾಢವಾಗಿತ್ತು ಎಂಬುದರ ಬಗೆಗೆ ತಮ್ಮ ಕಥೆ ಕಾದಂಬರಿಗಳಲ್ಲಿ ಚಿತ್ರಿಸುತ್ತಾ ಹೋಗಿದ್ದಾರೆ. ಈ ಜಾತಿ ವ್ಯವಸ್ಥೆಯನ್ನು ವಿರೋಧಿಸುವ, ವಿರೋಧಿಸಲು ಹೋಗಿ ಹಲವು ತೊಂದರೆಗಳನ್ನು ಅನುಭವಿಸುವ ನಾಯಕರ ಚಿತ್ರಣವನ್ನು ಒಂದು ಕಡೆ ಕೊಟ್ಟಿದ್ದಾರೆ. ಮತ್ತೊಂದು ಕಡೆ ಜಾತಿಯನ್ನು ಪುರಸ್ಕರಿಸಲು ಆಗದೆ, ವಿರೋಧಿಸಲು ಆಗದೆ ಜೀವನದಲ್ಲಿ ಮಾನವೀಯ ಬಾಂಧವ್ಯಗಳಿಗೆ ಕಟ್ಟುಬಿದ್ದು ಬೇರೆ ದಾರಿ ಇಲ್ಲದೆ ಜೀವನವನ್ನು ಇದ್ದಂತೆ ಸ್ವೀಕರಿಸುವ ನಾಯಕರ ಚಿತ್ರಣವಿದೆ.

'ಸಂಬಂಧ' ಕಥೆಯಲ್ಲಿ ನಾಯಕ ತನ್ನ ಬಾಲ್ಯ ಸಂಗಾತಿಯಾಗಿದ್ದ ಬ್ರಾಹ್ಮಣ ತರುಣಿ ಲಲಿತಳ ಬದುಕಿನ ದುರಂತವನ್ನು ಅಸಹಾಯಕನಾಗಿ ನೋಡುತ್ತಲೇ ಮಾನಸಿಕ ಯಾತನೆ ಅನುಭವಿಸುತ್ತಾನೆ. ಲಲಿತ ಬೇರೊಬ್ಬನನ್ನು ಮದುವೆಯಾಗಿ ಹಲವಾರು ತೊಂದರೆಗಳನ್ನು ಅನುಭವಿಸುತ್ತಿರುತ್ತಾಳೆ. ಲಲಿತಾಳಿಗೆ ಕಷ್ಟಕಾಲದಲ್ಲಿ ಸಹಾಯಮಾಡಲು ಹೋದ ನಾಯಕನನ್ನು ತಪ್ಪಾಗಿ ಭಾವಿಸಿದ ಲಲಿತಾಳ ಗಂಡ ಆಕೆಗೆ ಜಜ್ಜಿ ಬಿಸಾಡಿದ್ದಾನೆ. ಕಥೆಗಾರರು ಚಿತ್ರಿಸಿರುವ ಈ ದುರಂತ ಚಿತ್ರಣಗಳನ್ನು ಗುರುತಿಸುತ್ತಾ ಅನಂತಮೂರ್ತಿಯವರು "ಇಲ್ಲಿ ಶೂದ್ರ ಕಥಾನಾಯಕನಿಗೂ ಬ್ರಾಹ್ಮಣ ಹುಡುಗಿ ಲಲಿತಾಳಿಗೂ ಇರುವ ಸಂಬಂಧ, ಸೂಕ್ಷ್ಮವಾಗಿ ಚಿತ್ರಿತವಾಗಿದೆ. ಆಕ್ರೋಶವಿಲ್ಲದೆ ಮಿತಿಗಳನ್ನು ಅರಿತುಕೊಳ್ಳುವ ಲಿಬರಲ್ ಮನೋಧರ್ಮ ಒಂದು ಜೀವನ ದುರಂತವನ್ನು ನಿಷ್ಠುರವಾಗಿ ಸೆಂಟಿಮೆಂಟಲ್ ಆಗದಂತೆ ಹೇಗೆ ವ್ಯಕ್ತಪಡಿಸಬಹುದೆಂಬುದಕ್ಕೆ ಈ ಕಥೆ ಒಳ್ಳೆಯ ಉದಾಹರಣೆ".[6] ಎಂದು ಹೇಳಿರುವ ಮಾತುಗಳು ಅರ್ಥಪೂರ್ಣವಾಗಿವೆ.

ಬದುಕನ್ನು ಬಾಲಕನ ಮುಗ್ಧ ದೃಷ್ಟಿಕೋನದಲ್ಲಿ ನೋಡಿರುವ ಕಥೆ 'ಆಗಂತುಕ'. ಈ ಕಥೆಯು ಸಾವಿನ ಸುತ್ತಮುತ್ತಲಿನ ವಿವರಗಳ ನಡುವೆ ಹರಡಿಕೊಂಡಿದೆ. ಗ್ರಾಮೀಣ ಬದುಕಿನ ವಿವರಗಳು ಒಂದಕ್ಕೊಂದು ಹೊಂದಿಕೊಂಡು ಬೆಳೆಯುತ್ತ ಹೋಗುತ್ತವೆ. ಇಲ್ಲಿ ಒಂದು ಹಳ್ಳಿಯ ಜೀವನ ಸೂಚ್ಯವಾಗಿ ವ್ಯಕ್ತವಾಗಿದೆ. ಕಥೆಯಲ್ಲಿ ಬರುವ ಸಾವು, ದುಗುಡ, ಅಳು, ದುಃಖ, ಪ್ರೇಮ, ಭಯ, ಹಿಂಸೆ, ಯಾತನೆ, ಕ್ರೌರ್ಯ ಮುಂತಾದವುಗಳನ್ನು ಎಳೆಯ ಆದರೆ ಸಂವೇದನಾಶೀಲನಾದ ಕಿಟ್ಟಿಯ ಮುಖಾಂತರ ಕಟ್ಟಿಕೊಡುವ ರೀತಿ ಅದ್ಭುತವಾಗಿವೆ. ಅವ್ವ ಅಜ್ಜಿಯರ ಜಗಳ, ಅಪ್ಪನು ಅವ್ವನನ್ನು ಸಾಯಬೀಳ ಹೊಡೆಯುವುದು ಇತ್ಯಾದಿ ವಿಷಯಗಳು ಈ ಕಥೆಯಲ್ಲಿ ಬರುತ್ತವೆ. ಇಲ್ಲಿ ಲೇಖಕರು ಯಾವುದನ್ನು ವಿವರವಾಗಿ ಹೇಳದೆ ಸೂಚ್ಯವಾಗಿ, ಪರಿಣಾಮಕಾರಿಯಾದ ಭಾಷೆಯಲ್ಲಿ ಸಾವಿನ ಬಗೆಗೆ ಕಟ್ಟಿಕೊಟ್ಟಿರುವ ರೀತಿ ಅದ್ಭುತವಾಗಿದೆ. 'ಸಾಸ್ವತ', 'ಯಂಗಾಗ್ಬುಟ್ಟವ್ರೆ', 'ಯಿಂಡುಕ್ಬುಟ್ಟಿದೆ' ಎಂಬ ಗ್ರಾಮೀಣ ನುಡಿಗಟ್ಟನ್ನು ಸಹಜವಾಗಿಯೇ ಗ್ರಾಮೀಣ ಭಾಷೆಯಲ್ಲಿಯೇ ತಂದಿದ್ದಾರೆ.

'ನೆಲಗುಮ್ಮ' ಈ ಕಥೆಯಲ್ಲಿ ಅಕ್ಕನ ಮಗಳನ್ನು ಮದುವೆಯಾಗುವಂತೆ ಹಿರಿಯರ ಒತ್ತಾಯವಿದೆ. ಕಥಾನಾಯಕ ತನ್ನ ಅಜ್ಜಿಯು ಕಾಯಿಲೆ ಬಿದ್ದು ಸಾವನ್ನು ಎದುರುನೋಡುತ್ತಿರುವ ವಿಷಯ ತಿಳಿದು ವಿಚಲಿತನಾಗುವುದಿಲ್ಲ. ಪ್ರಬುದ್ಧ ವೈಚಾರಿಕನಾದ ಇವನು ಪ್ರತಿಯೊಬ್ಬರಿಗೂ ಸಾವು ಅನಿವಾರ್ಯ ಎಂಬುದನ್ನು ಅರಿತುಕೊಂಡವನಾಗಿದ್ದಾನೆ. ಆದರೆ ಈ ಸಂಬಂಧಗಳು ಅವನನ್ನು ಹಿಂಸಿಸುತ್ತವೆ. "ಮಾವ ತನ್ನ ದಪ್ಪ ಗಂಟಲನ್ನೆತ್ತಿ, ತನ್ನ ಕಂದನ್ನ ಕರೀಸಿ ಅಂತ ಆಪಾಟಿ ನರಳಾಡ್ದೆ, ಅದೇನೆಲ್ಲ ಹೇಳ್ಬಿಡು' ಎಂದ, ಭಯವಾಯಿತು. ಮಾವನ ಮೇಲೆ ಸಿಟ್ಟು ಬಂತು. ದರಿದ್ರ ಎಲ್ಲಾ ಪಿಶಾಚಿಗಳೆ, ಕಾಡುವುದಕ್ಕೆಂದೇ ಅವತರಿಸಿ ಬಂದವೇನೋ"[೨] ಎನ್ನುತ್ತಾನೆ. ಇಲ್ಲಿ ಕರುಳಬಳ್ಳಿ ಸಂಬಂಧಗಳ ಸೂಕ್ಷ್ಮ ವಿವರಗಳನ್ನು ಸೂಕ್ತವಾಗಿಯೆ ತಂದಿದ್ದಾರೆ. ಅಕ್ಕನಂತೂ ಅಜ್ಜಿ ತಮ್ಮನ್ನೆಲ್ಲ ಕಟ್ಟಿಕೊಂಡು ಸಾಕಿ ಬಂದು ದಡಕ್ಕೆ ಮುಟ್ಟಿಸಿದ್ದೆಲ್ಲವನ್ನು ರಾಗ ಸಹಿತ ಆಡಿ ಮುಗಿಸಿದ್ದು ಅವನಿಗೆ ಇನ್ನು ಹಿಂಸೆಯಾಗುತ್ತದೆ.

ಅವನು ಬೇರೆ ಜಾತಿಯವಳನ್ನು ಮದುವೆಯಾಗುವ ವಿಷಯ ಅಜ್ಜಿಗೆ ತಿಳಿದು ಕಳೆದ ಸಲ ಊರಿಗೆ ಹೋಗಿದ್ದಾಗ ಹಜಾರದ ಮೂಲೆಯಲ್ಲಿ ಕುಕ್ಕರುಗಾಲಿನಲ್ಲಿ ಕೂತು ಕವಳ ಕುಟ್ಟುತ್ತ ತನ್ನ ಮೊಮ್ಮಗಳನ್ನು–ಅದೂ ತಾನೇ ಎತ್ತಿ ಆಡಿಸಿದ್ದವಳನ್ನು–ಕಟ್ಟಿಕೊಳ್ಳದೇ ಯಾವಳೋ ಕುಲಗೆಟ್ಟವಳ್ನ ಕಟ್ಕೋತೀನಿ ಅಂತ ನಮ್ಮನೆ ದೇವ್ರು ದಿಂಡಿರ್ನೆಲ್ಲ ದೂರ ಮಾಡ್ತಿಯಲ್ಲೋ ಮನೆಹಾಳ ಎಂದು ಬೈಸಿಕೊಂಡಿದ್ದ. ಇಡೀ ಊರಿನವರೇ ಇವನ ಓದು ಬುದ್ಧಿವಂತಿಕೆಗೆ ಮೆಚ್ಚಿ ಮಾತಾಡುವ ಮಾತುಗಳು ಇವನನ್ನು ಅಲ್ಲಾಡಿಸುತ್ತವೆ. "ಅಲ್ಲ ಕಣ್ಲಪ್ಪ ಆಪಾಟಿ ಕಲ್ತು ಎಲ್ರ ಕೈಲೂ ಸೈ ಅಂತ ಅನ್ನಸ್ಕಂಡಿದ್ದೆ. ಅಲ್ಲ ಹೀಗ್ಯಾಕೆ ಛೀ ಅನ್ನಸ್ಕಂಡೆ? ಊರಾಗೆಲ್ಲ ಪುಕಾರು –ನೀ ಯಾವಳ್ನೊ ಬ್ಯಾರೆ ಜಾತಿಯವಳ್ನ ರಿಜಿಸ್ಟ್ರಿ ಮದ್ವೆ ಮಾಡ್ಕಬುಡ್ತೀನಿ ಅಂತ ಕೂತಿದ್ದೀಯಂತೆ. ಛೀ ಬುಡಪ್ಪ ಅಂತ ಕೆಲ್ಸ ಮಾಡಬ್ಯಾಡ, ಅಲ್ಲ ನಿನ್ನಕ್ಕನ ಮಗ್ಳು ಎಂತ ಚಂದಕ್ಕೈತೆ? ಅಲ್ದೆ ವೈನಾಗಿ ವಗತಾನ ಮಾಡದ್ನೂ ಕಲಿತದೆ. ಅದನ್ನೆ ಮಾಡ್ಕಂಡು ಗ್ರಾಸ್ತ ಅನ್ನಸ್ಕೊ"[೩] ಇಲ್ಲಿ ಗ್ರಾಮೀಣ ಜನರಲ್ಲಿ

ಆತ್ಮೀಯ ಸಂಬಂಧಗಳ ಬಗೆಗೆ ಎಂತಹ ಗಟ್ಟಿಯಾದ ಅಭಿಪ್ರಾಯಗಳಿರುತ್ತವೆ, ಅದಕ್ಕೆ ಧಕ್ಕೆ ಬಂದಾಗ ಯಾವ ರೀತಿಯ ಪ್ರತಿಕ್ರಿಯೆಗಳು ವ್ಯಕ್ತವಾಗುತ್ತವೆ ಎಂಬುದನ್ನು

ಅದ್ಭುತವಾಗಿ ಸೆರೆಹಿಡಿದಿದ್ದಾರೆ.

'ಫೀನಿಕ್ಸ್', 'ಗೀಜಗನ ಗೂಡು', 'ಇನ್ನೊಂದು ಪ್ರಣಯ ಪ್ರಸಂಗ', 'ಅಂಟಿದ ನಂಟಿನ ಕೊನೆ ಬಲ್ಲವರಾರು' ಈ ಕಥೆಗಳ ಸಾಮಾನ್ಯವಾದ ಲಕ್ಷಣವೆಂದರೆ, ಕಥಾನಾಯಕರುಗಳೆಲ್ಲರೂ ಗ್ರಾಮೀಣ ಪರಿಸರದಿಂದ ಬಂದ ಶೂದ್ರವರ್ಗದವರು. ಬುದ್ಧಿವಂತರು, ವೈಚಾರಿಕ ನೆಲೆಗಟ್ಟಿನಲ್ಲಿ ಬದುಕನ್ನು ಅರ್ಥೈಸುವ ಇವರು ಧೈರ್ಯಶಾಲಿಗಳು. ಇವರ ಕಥಾನಾಯಕಿಯರು ಬ್ರಾಹ್ಮಣ ತರುಣಿಯರು. ಇವರು ವಿದ್ಯಾವಂತರಾಗಿದ್ದು ಹೊಸ ಬದುಕಿಗೆ ಹಾತೊರೆಯುವಂತಹವರು. ಜಾತಿ, ವಯಸ್ಸು, ಅಂತಸ್ತು ಮಡಿವಂತಿಕೆಗಳನ್ನು ಕಳಚಿ ಅವರನ್ನು ಪ್ರೀತಿಸುತ್ತಾರೆ.

'ಅಂಟಿದ ನಂಟಿನ ಕೊನೆ ಬಲ್ಲವರಾರು' ಕಥೆಯ ನಾಯಕ ಬ್ರಾಹ್ಮಣ ದ್ವೇಷಿ. ಈತ ಬ್ರಾಹ್ಮಣ ತರುಣಿಯರನ್ನು ಪ್ರೀತಿಸುವಂತೆ ನಟಿಸಿ ಅವರ ಶೀಲವನ್ನು ಹಾಳುಮಾಡಿ ಆ ಜಾತಿಯ ಮೇಲೆ ಸೇಡುತೀರಿಸಿಕೊಳ್ಳುತ್ತಿರುತ್ತಾನೆ. ಸಾಹಿತ್ಯಕವಾಗಿ ಸಾಧನೆ ಮಾಡಿ, ವೈಚಾರಿಕ ದೃಷ್ಟಿಯಿಂದ ಆಲೋಚಿಸುವ ಇವನು ಸಾಕಷ್ಟು ಧೈರ್ಯದಿಂದ ಬ್ರಾಹ್ಮಣತ್ವದಿಂದ ಆಗುವ ಅನ್ಯಾಯವನ್ನು ಖಂಡಿಸಿ, ಲೇವಡಿ ಮಾಡುತ್ತಾನೆ. ಗ್ರಾಮೀಣ ಜೀವನದಲ್ಲಿ ಜಾತಿಪ್ರಜ್ಞೆ ಅತಿಯಾಗಿರುತ್ತದೆ. ಅದರ ಜೊತೆ ಜೊತೆಗೆ ಶೋಷಣೆ ತಾರತಮ್ಯವೂ ಇರುತ್ತದೆ. ಇಲ್ಲಿನ ನಾಯಕ ಇವುಗಳನ್ನು ಸಹಿಸುವುದಿಲ್ಲ, ಬದಲಿಗೆ ವಿರೋಧಿಸುತ್ತಾನೆ. ಒಣಬ್ರಾಹ್ಮಣ್ಯದಿಂದ ಆಗುವ ಅನ್ಯಾಯಗಳನ್ನು ಖಂಡಿಸುವ, ಪ್ರಶ್ನಿಸುವ ನಾಯಕನಾಗಿದ್ದಾನೆ. ಇಲ್ಲಿಯ ಕಥಾನಾಯಕ ಶಾಲಿನಿಯ ಮನಸ್ಸು ಪರಿವರ್ತನೆಯಾಗುವ ಮಟ್ಟಿಗೆ ತನ್ನ ಪ್ರಭಾವವನ್ನು ಆಕೆಯ ಮೇಲೆ ಬೀರುತ್ತಾನೆ. ಹೇಗೆಂದರೆ ಶಾಲಿನಿಯು ಮನು ಧರ್ಮಶಾಸ್ತ್ರವನ್ನು 'ಕಗ್ಗ', 'ಸ್ಟುಪಿಡ್' ಎಂದು ಹೀಯಾಳಿಸುತ್ತಾಳೆ.

ಅತ್ಯಂತ ಸೂಕ್ಷ್ಮ ಗ್ರಹಿಕೆಯ ಆಲನಹಳ್ಳಿಯವರ ಮೇಲೆ ತಮ್ಮ ಬಾಲ್ಯದ ಜೀವನ ಹಾಗೂ ಗ್ರಾಮೀಣ ಬದುಕಿನ ಪರಿಸರ ದಟ್ಟವಾದ ಪ್ರಭಾವ ಬೀರಿವೆ. ವಾಸ್ತವವಾಗಿ ಆಲನಹಳ್ಳಿ ತಮ್ಮ ಬಾಲ್ಯದ ಅನುಭವ ಮತ್ತು ಗ್ರಾಮೀಣ ಬದುಕಿಗೆ ಧುಮುಕಿದಾಗಲೇ ದೊಡ್ಡ ಕಲಾಕಾರರಾಗುತ್ತಾರೆ. ಇವರ ಮೂರು ಕಾದಂಬರಿಗಳು ಬಾಲ್ಯದ ಸಾಕ್ಷಿ ಪ್ರಜ್ಞೆಯ ಅಭಿವ್ಯಕ್ತಿ ಕ್ರಿಯೆಗೆ ಸಾಕ್ಷಿಯಾಗಿದೆ. ಹಾಗಾಗಿ ಆಲನಹಳ್ಳಿಯವರಿಗೆ ಬಾಲ್ಯದ ದಟ್ಟವಾದ ಗ್ರಾಮೀಣ ಬದುಕು ಪ್ರಮುಖವಾದ ಪ್ರೇರಣೆಯನ್ನು ನೀಡಿದೆ. ಈ ಮೂರು ಕಾದಂಬರಿಗಳು ಸಮೃದ್ಧವಾದ ಗ್ರಾಮೀಣ ಪರಿಸರದಿಂದ ಆವೃತ್ತಗೊಂಡವುಗಳಾಗಿವೆ. "ಕಾರಂತ, ಕುವೆಂಪು, ರಾವ್‌ಬಹಾದ್ದೂರ್ ಮುಂತಾದವರು ಗ್ರಾಮೀಣ ಬದುಕನ್ನು ಕುರಿತಂತೆ ವಾಸ್ತವದ ನೆಲೆಗಟ್ಟಿನಲ್ಲಿ ಕಾದಂಬರಿಗಳನ್ನು ರಚಿಸಿದ್ದಾರೆ. ಈ ಎಲ್ಲ ಪ್ರಮುಖ ಕಾದಂಬರಿಕಾರರ ಪ್ರೇರಣೆ, ಪ್ರಭಾವ ಆಲನಹಳ್ಳಿಯವರ

ಮೇಲೆ ಇದ್ದೇ ಇದೆ. ಅದರಲ್ಲೂ ಕುವೆಂಪು ಮತ್ತು ರಾವ್‌ಬಹದ್ದೂರರ ಕಾದಂಬರಿಗಳು ಇವರಿಗೆ ಪ್ರಮುಖವಾದ ಪ್ರೇರಣೆಯನ್ನು ಒದಗಿಸಿವೆ. ತಮ್ಮೊಳಗಿನ ಮಿಂಚಿನ ಪ್ರತಿಭೆ ಹಾಗೂ ಸಮೃದ್ಧ ಅನುಭವಗಳಿಂದ ಅವುಗಳೆಲ್ಲವನ್ನು ಅರಗಿಸಿಕೊಂಡು ತಮ್ಮ ಸಮಕಾಲೀನ ಬರಹಗಾರರಲ್ಲೇ ಆಲನಹಳ್ಳಿಯವರು ವಿಶಿಷ್ಟತೆಯನ್ನು ಗಳಿಸಿಕೊಂಡಿದ್ದಾರೆ. ಕುವೆಂಪು ಅವರ ಎರಡು

ಕಾದಂಬರಿಗಳು ಇವರ ಮೇಲೆ ದಟ್ಟವಾದ ಪ್ರಭಾವ ಬೀರಿರುವುದನ್ನು ತಮ್ಮ ಸಾಹಿತ್ಯಕ ಜೀವನದಲ್ಲಿ ಗುರುತಿಸಿಕೊಂಡಿದ್ದಾರೆ"[೪].

ಇವರ ಕಾದಂಬರಿ ಲೋಕಕ್ಕೆ ಜಮೀನ್ದಾರಿ ವ್ಯವಸ್ಥೆ, ಜಾತೀಯತೆ ಮತ್ತು ಅಸಮಾನತೆಗಳಿಂದ ತುಂಬಿ ತುಳುಕುವ ಗ್ರಾಮೀಣ ಲೋಕವು ಪ್ರೇರಣೆಯನ್ನು ಒದಗಿಸುತ್ತವೆ. ಹಾಗಾಗಿ ಗೆಂಡೆತಿಮ್ಮನಾಗಲಿ, ಭುಜಂಗಯ್ಯನಾಗಲಿ, ಗ್ರಾಮೀಣ ಪರಿಸರದಿಂದ ಕನ್ನಡ ಕಾದಂಬರಿ ಪ್ರಪಂಚಕ್ಕೆ ಪರಿಚಿತರಾಗಿ ನೆನಪಿನಲ್ಲಿ ಉಳಿಯುವ ನಾಯಕರಾಗಿದ್ದಾರೆ.

"ಕಾಡು" ಕಾದಂಬರಿಯಲ್ಲಿ ಕಿಟ್ಟಿ ಎಂಬ ಮುಗ್ಧ ಹುಡುಗ, ಆದರೆ ತುಂಬಾ ಸಂವೇದನಾಶೀಲನಾದ ಬಾಲಕನ ಮನೋದೃಷ್ಟಿಯಲ್ಲಿ ಕಾದಂಬರಿಯುದ್ದಕ್ಕೂ ಗ್ರಾಮೀಣ ಬದುಕನ್ನು ಬಿಚ್ಚುತ್ತಾ ಹೋಗುತ್ತಾರೆ. ಕಾದಂಬರಿಯ ಹರಹು ಕೂಡ ಚಿಕ್ಕದು. ಕಥೆ ನಡೆಯುವುದು ಕೊಪ್ಪಲು ಮತ್ತು ಹೊಸೂರು ಎಂಬ ಗ್ರಾಮಗಳ ಪರಿಸರದಲ್ಲಿ. ಇಲ್ಲಿ ಪ್ರಧಾನವಾಗಿ ಒಕ್ಕಲಿಗ ಜನಾಂಗದ ಬದುಕಿನ ಸುತ್ತಮುತ್ತ ಕಥೆ ಹರಡಿಕೊಂಡಿದೆ. ಇದಕ್ಕೆ ಪೂರಕವಾಗಿ ಲಿಂಗಾಯ್ತರು, ದಲಿತರು, ಬ್ರಾಹ್ಮಣರು ಬರುತ್ತಾರೆ. ಕಾದಂಬರಿಯಲ್ಲಿ ನಡೆಯುವ ಘಟನೆಗಳು ಒಂದಕ್ಕೊಂದು ಪೂರಕವಾದ ಸಾವಯವ ಸಂಬಂಧವನ್ನು ಹೊಂದಿವೆ.

ಪರಂಪರೆಯಿಂದ ಶ್ರೀಮಂತಿಕೆ ಮತ್ತು ಯಜಮಾನಿಕೆಯನ್ನು ಉಳಿಸಿಕೊಂಡು ಬಂದಿರುವ ಪ್ರತಿಷ್ಠಿತ ರೈತನಾದ ಚಂದ್ರೇಗೌಡ, ತನಗೆ ಮಕ್ಕಳಿಲ್ಲದ್ದರಿಂದ ಅಕ್ಕನ ಮಗನನ್ನು ತಂದು ಸಾಕಿಕೊಂಡಿದ್ದಾನೆ. ಈತನು ಸುಮಾರು ನೂರುಪಲ್ಲ ರಾಗಿ ಬೆಳೆಯುವುದು ಜೀತದಾಳುಗಳ ಮೂಲಕವೇ. ಚಂದ್ರೇಗೌಡ ತನ್ನ ಹೆಂಡತಿಯನ್ನು ಯಾವತ್ತೂ ಮಾನವೀಯವಾಗಿ ನೋಡುವುದಿಲ್ಲ, ಇನ್ನು ಊರಿನಲ್ಲಂತೂ ಇವನನ್ನು ಪ್ರಶ್ನೆ ಮಾಡುವವರು ಹುಟ್ಟಿಯೇ ಇಲ್ಲ. ಈ ಎಲ್ಲ ಹಮ್ಮಿನಿಂದ ಪಕ್ಕದ ಹೊಸೂರ ಬಸಕ್ಕನ ಜೊತೆಗೆ ಲೈಂಗಿಕ ಸಂಪರ್ಕ ಹೊಂದಿರುತ್ತಾನೆ. ಇದು ತನ್ನ ಯಜಮಾನಿಕೆಯ ಪ್ರತಿಷ್ಠೆಗೆ ದಕ್ಕಿರುವ ಮಾನ್ಯತೆಯೆಂದು ಈತ ಭಾವಿಸುತ್ತಾನೆ. 'ಕಾಡು' ಕಾದಂಬರಿಯಲ್ಲಿ ಕಿಟ್ಟಿ ಅಂಜುವುದು ದೊಡ್ಡವರ ಲೋಕದಲ್ಲಿರುವ ಕಾಡುತನಕ್ಕೆ. ಚಂದ್ರೇಗೌಡನ ಅನೈತಿಕ ಸಂಬಂಧದ ಬಗ್ಗೆ ಪ್ರತಿಯಾಡಲಾರದ ಕಮಲಮ್ಮನ ಬರಡು ಬದುಕಿಗೆ ಕಿಟ್ಟಿಯೊಬ್ಬನೆ ಆಸರೆಯಾಗಿರುವವನು. ಅತ್ತೆಯು ಪೂಜೆ ಹಾಕಿಸಿದ್ದು, ಮಾವ ಅತ್ತೆಗೆ ದನಕ್ಕೆ ತರಿದ ಹಾಗೆ ತರಿಯುವುದು, ಪ್ರತಿನಿತ್ಯ ಮಾವ ಊಟವಾದ ಮೇಲೆ ಜಿರಕಿ ಜೋಡು ಮೆಟ್ಟಿಕೊಂಡು ಹೋಗುವುದು,

ಲೋಂಪಿಯನ್ನು ಕೇಳಿದಾಗ 'ದೊಡ್ಡವರ ವಿಚಾರ ನಿಮಗ್ಯಾಕ್ರಯ್ಯ' ಅನ್ನುವುದು ಇವುಗಳೆಲ್ಲವು ಎಳೆಯ ವಯಸ್ಸಿನ ಕಿಟ್ಟಿಗೆ ಬಿಡಿಸಲಾಗದ ಕಗ್ಗಂಟುಗಳಾಗಿವೆ. ಊರಿನ ಪ್ರಧಾನ ವ್ಯಕ್ತಿಯಾದ ಚಂದ್ರೇಗೌಡನ ದಬ್ಬಾಳಿಕೆಯಿಂದ ಇಡೀ ಊರೆ ತತ್ತರಿಸಿಹೋಗುತ್ತದೆ. ಇವನು ಕಾಡಿನ ಪ್ರಾಣಿಗಳು ಹೇಗೆ ತಮ್ಮ ಎಲ್ಲೆಯಲ್ಲಿ ಸರ್ವಾಧಿಕಾರತ್ವದಿಂದ ಮೆರೆಯುತ್ತವೆಯೋ ಹಾಗೆ ಮೆರೆದು ಊರ ಅವನತಿಗೆ ಕಾರಣನಾಗುತ್ತಾನೆ. ಊಳಿಗಮಾನ್ಯ ವ್ಯವಸ್ಥೆಯಲ್ಲಿ ಹೆಣ್ಣು, ಭೂಮಿ ಮತ್ತು ಜಾತಿಗಳು ಹೇಗೆ ಪ್ರಮುಖ ಆಧಾರ

ಸ್ತಂಭಗಳಾಗಿರುತ್ತವೆ, ಈ ವ್ಯವಸ್ಥೆಗೆ ಕಿಂಚಿತ್ ಧಕ್ಕೆ ಬಂದರೂ ಅದರ ದುಷ್ಪರಿಣಾಮ ಇಡೀ ಬದುಕನ್ನು ಹೇಗೆ ದುರಂತಕ್ಕೊಯ್ಯುತ್ತದೆ ಎಂಬುದನ್ನು ಚಿತ್ರಿಸಿದ್ದಾರೆ. ಇಲ್ಲಿ ಚಂದ್ರೇಗೌಡ, ಬಸಕ್ಕನ ಸಖ್ಯ ಬೆಳೆಸುವುದು, ಗುಡಿ ಅಯ್ನೋರು ಹೊಲೇರ ಕಾಳಿ ಜೊತೆ ಲೈಂಗಿಕ ಸಂಬಂಧವನ್ನಿಟ್ಟುಕೊಳ್ಳುವುದು ಪ್ರಶ್ನಾತೀತ ಸಂಗತಿಗಳಾಗುತ್ತವೆ. ಆದರೆ ಅದನ್ನೇ ದಲಿತನೊಬ್ಬನು ಮಾಡಿದಾಗ ಇಲ್ಲಿನ ಊಳಿಗಮಾನ್ಯ ವ್ಯವಸ್ಥೆಯು ಆ ಪ್ರಕರಣವನ್ನು ಪರಂಚಾಯ್ತಿಗೆ ತಂದು ದಂಡ ವಿಧಿಸಲೇಬೇಕೆಂಬ ಒತ್ತಾಯ ತರುತ್ತಿದೆ. ಇಲ್ಲದಿದ್ದರೆ ಪ್ರಸಿದ್ಧವಾದ ಕೊಪ್ಪಲ ಪ್ರತಿಷ್ಠೆಗೆ ಧಕ್ಕೆ ಬರುತ್ತದೆ ಎಂದು ಭಾವಿಸುತ್ತದೆ. ಪಂಚಾಯ್ತಿ ಹೇಗೆ ನಡೆಯುತ್ತದೆ ಎಂದರೆ ಗುಡಿ ಅಯ್ನೋರು, ಸೀತಾರಾಮಯ್ಯನವರು, ಚಂದ್ರೇಗೌಡ ಇವರೆಲ್ಲ ನ್ಯಾಯಕಟ್ಟೆಯ ಮೇಲೆ ಕೂರುವವರು. ಉಳಿದವರೆಲ್ಲ ಕೆಳಗೆ ಕುಕ್ಕರಗಾಲಿನಲ್ಲೇ ಕಲ್ಲು ಮೇಲೆ ಕೂರುತ್ತಾರೆ. ಪಂಚಾಯ್ತಿಗೆ ಹೊಸೂರ ಶಿವಗಂಗ ಕೂಡ ಬಂದಿರುವುದು ಚಂದ್ರೇಗೌಡನಿಗೆ 'ನಮ್ಮೂರ ಉಳುಕು ಬೇರೆ ಊರಿಗೆ ಗೊತ್ತಾಗುತ್ತದಲ್ಲ' ಎಂಬ ಆತಂಕಕ್ಕೆ ಕಾರಣವಾಗುತ್ತದೆ. ದುರಂತ ಎಂದರೆ ಇಡೀ ಪಂಚಾಯ್ತಿಯ ಮುಂದೆ ದೇವಿಯ ಗಂಡನಾದ ಗಡಿಗೆಸುಬ್ಬ ತನ್ನ ಹೆಂಡತಿಯ ಅಕ್ರಮ ಸಂಬಂಧವನ್ನು ಕುರಿತು ತಾನೇ ರಸವತ್ತಾಗಿ, ಅಲ್ಲಿ ಸೇರಿರುವ ಎಲ್ಲರಿಗೂ ಸಂತೋಷವಾಗುವಂತೆ ಹೇಳಬೇಕು. "ನೋಡೋ ಸುಬ್ಬ ದೇವರ ಗುಡಿ ಮುಂದೆ ನಿಂತಿದ್ದಿ ಸುಳ್ಳು ಮಾತ್ರ ಹೇಳಬ್ಯಾಡ. ಏನು ನಡೀತು ಅಂತ ಸರಿಯಾಗಿ ಹೇಳು ಅಂದರು. 'ಅಯ್ಯೋ ನಮ್ಮಪ್ಪ ದ್ಯಾವರಂತ ನಿಮ್ಮುಂದೆ ಸುಳ್ಳು ತಟವಟ ಮಾಡಿ ನಾ ಯಾವ ನರಕಕ್ಕೋಗಲಿ. ನನ್ನ ಬಾಯ್ಲಿ ಉಳ ಬಿದ್ಹೋಗಲಿ'. ಇಲ್ಲಿ ಅಸಹಾಯಕ ದಲಿತ ಜನಾಂಗದ ವಿಷಾದನೀಯ ಸ್ಥಿತಿಗತಿಯನ್ನು ಕಾಣಬಹುದು. "ಯಾವ ಚಟೀರನೆ ದೇವಿಯ ಕೆನ್ನೆಗೊಂದು ಬಾರಿಸಿಯೇ ಬಿಟ್ಟರು. 'ಅಲ್ಕಾರಂಡೆ ಇನ್ನೇನೇಳ್ದ ಬೊಗಳು. ಅವನು ಕರ್ದಾ ಅಂತ ನೀ ಯಾಕೆ ಪೋದೆ"[೨] ಎಂದರು. ದೇವಿ ಏನೊಂದು ಮಾತು ಆಡಲಾಗದೆ ಥರಥರ ನಡುಗುತ್ತಲೇ ಇದ್ದಳು. ಚಂದ್ರೇಗೌಡ ಕ್ರೂರವಾಗಿ ವರ್ತಿಸಿ ದಲಿತ ಮಹಿಳೆಯನ್ನು ಅಪಮಾನ ಮಾಡಿ ಹೊಡೆದದ್ದು ಅವನ ಮೃಗೀಯ ಭಾವನೆಯ ಪ್ರತೀಕವಾಗಿದೆ. 'ಹೊಸೂರು ಮತ್ತು ಕೊಪ್ಪಲಿನಂತಹ ಕುಗ್ರಾಮಗಳಲ್ಲಿ ನಡೆಯುವ ಉಳ್ಳವರ ನಡುವಿನ ನಿಲ್ಲದ ಘರ್ಷಣೆ ಮತ್ತು ಆ ಮೂಲಕ ದಲಿತರ ಶೋಷಣೆ-ಇಡೀ ಭಾರತದ ಹಳ್ಳಿಗಳಲ್ಲೆಲ್ಲ ನಡೆಯುತ್ತದೆಂಬುದನ್ನು ಲೇಖಕರು ಧ್ವನಿಸುತ್ತಾರೆ'. ಇದನ್ನು ಎಸ್. ವೆಂಕಟರಾಮ್ ಅವರು "ಇಲ್ಲಿ ನ್ಯಾಯಸ್ಥರಾಗಿರುವವರು, ದಣಿಗಳೂ, ಬುದ್ಧಿಯುವರು, ಗೌಡರು, ಅವರೆದುರು ನಿಂತಿರುವವರೆಲ್ಲಾ ಹರಿಜನರು. ಅಂತೆಯೇ ಈ ಪಂಚಾಯಿತಿ. ಆದರೆ ಅದೇ ಗುಡಿ ಅಯ್ನೋರ

ತಂಗಿ ಸಾವಿತ್ರಮ್ಮ ಕಳ್ಳತನದಲ್ಲಿ ಬಸುರಾಗಿ ನೇಣುಹಾಕಿಕೊಂಡಾಗ ಅದೇ ಬುದ್ಧಿಯವರೂ, ಗುಡಿ ಅಯ್ನೋರೂ, ಗೌಡರೂ ರಾತ್ರೋರಾತ್ರಿ ಕಳ್ಳತನದಲ್ಲಿಯೇ ಹೆಣ ಸುಟ್ಟುಬಿಡುತ್ತಾರೆ. ಸಿಂಗಪ್ಪಗೌಡರ ಎರಡನೇ ಹೆಂಡತಿ ಹೊಲೇರ ಹನುಮನೊಡನೆ ಓಡಿಹೋದಾಗ ಸಹ ಯಾವ ಪಂಚಾಯಿತಿಯೂ ಇಲ್ಲದೆ ಪ್ರಕರಣ ಮನೆ ಒಳಗಡೆಯೇ ಮುಗುಂ ಆಗಿ ಮುಕ್ತಾಯವಾಗುತ್ತದೆ. ಇದೂ ಕೂಡಾ ಸುಪ್ರಸಿದ್ಧ ಕೊಪ್ಪಲು ನ್ಯಾಯವೇ, ಕೊಪ್ಪಲಿನಂತ ಐದೂವರೆ ಲಕ್ಷ ಹಳ್ಳಿಗಳ ನ್ಯಾಯವೇ. ಮನು ರೂಪಿಸಿದ ನ್ಯಾಯವೇ. ಇದನ್ನು ಉತ್ತರ ಭಾರತದ ಜಾನಪದ ಭಾಷೆಯಲ್ಲಿ 'ಚಮ್ಮಾರರ ಜಗಳದಲ್ಲಿ ಚೌಧರಿಗಳ ನ್ಯಾಯ'

ಎನ್ನುತ್ತಾರೆ"[೬] . ಎಂದು ಸ್ಪಷ್ಟವಾಗಿ ಗುರುತಿಸಿದ್ದಾರೆ.

ಚಂದ್ರೇಗೌಡ ದಲಿತ ಕೆಂಚನಿಗೆ ಸಾಯಬೀಳ ಹೊಡೆಯುತ್ತಾನೆ. ಇದನ್ನು ತಪ್ಪಿಸಲು ಬಂದ ಪಕ್ಕದ ಊರಿನ ಶಿವಗಂಗನಿಗೂ ನಾಲ್ಕು ಬಾರಿಸಿಬಿಡುತ್ತಾನೆ. ಇದನ್ನೇ ದ್ವೇಷವಾಗಿಟ್ಟುಕೊಂಡ ಶಿವಗಂಗ ಚಂದ್ರೇಗೌಡನ ರಾಗಿ ಮೆದೆಗೆ ಬೆಂಕಿಯನ್ನಿಡುತ್ತಾನೆ. ಸಣ್ಣದನ್ನೇ ದೊಡ್ಡದು ಮಾಡಿ ಪಂಚಾಯ್ತಿ ಮಾಡುವ ಚಂದ್ರೇಗೌಡ ಇದರ ಬಗ್ಗೆ ಪಂಚಾಯ್ತಿ ಮಾಡಿ ಶಿವಗಂಗನಿಗೆ ಎಚ್ಚರಿಕೆ ಕೊಟ್ಟಿದ್ದರೆ ಮುಂದಿನ ಅನಾಹುತ ತಪ್ಪಿಸಬಹುದಾಗಿತ್ತು. ನಿಜಸ್ಥಿತಿಯೆಂದರೆ ರಾಗಿ ಮೆದೆಯು ಬೆಂಕಿಗೆ ಆಹುತಿಯಾದದ್ದರಿಂದ, ಚಂದ್ರೇಗೌಡನ ಜೀವಿತಕ್ಕೆ ಏನೂ ತೊಂದರೆಯಾಗುವುದಿಲ್ಲ. ಆದರೆ ಅವನ ಮನೆಯಲ್ಲಿ ಜೀತಮಾಡಿಕೊಂಡು ಬದುಕುತ್ತಿದ್ದ ದಲಿತ ಕುಟುಂಬಗಳಿಗೆ ಪ್ರತಿವರ್ಷದಂತೆ ಅರೆಹೊಟ್ಟೆಯ ಬಾಳೇ ಗತಿಯಾಗುತ್ತದೆ.

ಕಾಲ ಎಂಬುದು ಎಲ್ಲವನ್ನು ಮೆಟ್ಟಿ ನಿಲ್ಲುತ್ತದೆ. ಹೊಸೂರು ಮತ್ತು ಕೊಪ್ಪಲಿನ ನಡುವೆ ಏನೇ ಜಿದ್ದು, ದ್ವೇಷ, ಮಾತ್ಸರ್ಯ, ಪ್ರತಿಷ್ಠೆಗಳು ಇದ್ದಿತಾದರೂ ಇವುಗಳನ್ನು ಮರೆಸುವಂತೆ ಹೊಸೂರ ಓಕಳಿ ಹಬ್ಬ ಮತ್ತು ಕೊಪ್ಪಲಿನ ನಾಟಕ ಒಟ್ಟಿಗೆ ಬರುತ್ತವೆ. ಹೊಸೂರಿನ ಓಕಳಿ ಹಬ್ಬ ಹೆಗ್ಗಡ ದೇವನಕೋಟೆಯ ಸರಹದ್ದಿನಲ್ಲೇ ಪ್ರಸಿದ್ಧಿಯಾದದ್ದು. ಓಕಳಿ ಆಟ ಆಡುವುದು ಹಿಂದಿನಿಂದಲೂ ಹೊಸೂರು ಮತ್ತು ಕೊಪ್ಪಲಿನ ನಡುವೆ ನಡೆಯುತ್ತ ಬಂದಿದೆ. ಆದರೆ ಚಂದ್ರೇಗೌಡರು ಹಿಂದಿನ ದ್ವೇಷದಿಂದ ಒಪ್ಪಿರುವುದಿಲ್ಲ. ಆದರೆ ಹೊಸೂರಿನ ಹಿರಿಯರೊಬ್ಬರು ಹೀಗೆ ಹೇಳುತ್ತಾರೆ. ನೋಡು ಚಂದ್ರಪ್ಪ ಊರಂದ್ಮೇಲೆ ವಲಗೇರಿ ಇದ್ದೇ ಇರುತ್ತದೆ. ಏನೊ ಒಂದು ಇಸಗಳಿಗೇಲಿ ಆಗಬಾರ್ದು ಆಗೋಯ್ತು. ಅದನ್ನೇ ಕಟ್ಕಂಡಿರಬಾರ್ದು. ಕೇಳು ತಲೆ ತಲೀಂದ ನಡಕೊಂಡು ಬಂದಿರೋದು ಇದು. ಹೊಸೂರು-ಕೊಪ್ಪಲು ಯಿಂದಕ್ಕೆ ಒಂದೆ ಊರಾಗಿದ್ದಂತೆ. ಈಗ ಕಲಿಕಾಲ ಬತ್ತು ಜನಕ್ಕೆ ನಿಯತ್ತಿಲ್ಲ ಅದ್ಕೆ ಅಲ್ವಾ ಮೂರು ವರ್ಷದಿಂದ ಅನ್ನ ಕಾಣ್ದೆ ಜನ ಒಣಗಿದ್ದು ವೋಗ್ಲಿ ನೀ ದೊಡ್ಡ ಮನಸ್ಸು ಮಾಡು ಎಂದರು. ಇಲ್ಲಿ 'ಗ್ರಾಮೀಣ ಜನರು ಜಗಳ ದ್ವೇಷ, ಮಾತ್ಸರ್ಯಗಳಲ್ಲಿ ಮುಳುಗಿರುವಾಗಲೂ ಭಾವನಾತ್ಮಕ ಸಂಬಂಧಗಳಲ್ಲಿ ತೀರ ಆಪ್ತವಾಗಿಯೇ ನಡೆದುಕೊಳ್ಳಲು ಆಶಿಸುವ ಹೃದಯವಂತಿಕೆಯನ್ನು ಹೊಂದಿರುವುದನ್ನು ಕಾಣಬಹುದು. ಇಲ್ಲಿ ಗ್ರಾಮೀಣ ಬದುಕಿನಲ್ಲಿ ಏನೇ ಅಸಹನೆ, ದ್ವೇಷಗಳಿದ್ದರೂ ಹಬ್ಬ-ಹರಿದಿನ, ನಾಟಕ, ಮದುವೆ-ಮುಂಜಿ, ಆಚಾರ-ವಿಚಾರಗಳಲ್ಲಿ ಜನರೆಲ್ಲ ಒಂದಾಗುವುದನ್ನು ನೋಡಬಹುದು'. ಆದರೆ ಓಕಳಿ ಆಟ ಬೇರೆ ರೂಪಕ್ಕೆ ತಿರುಗಿದ್ದು ದುರಂತವೆನಿಸುತ್ತದೆ.

ಹೊಸೂರಿನ ಓಕಳಿ ಹಬ್ಬದ ಮಾರನೆ ದಿನವೇ ಕೊಪ್ಪಲ ನಾಟಕ. ಇದಕ್ಕೆ ಪ್ರಸಿದ್ಧವಾದ ಮಂಡ್ಯದ ದಿರಸನ್ನೇ ಒಪ್ಪಂದ ಮಾಡಿಕೊಂಡು ಬಂದಿರುತ್ತಾರೆ. ಹೊಸೂರು ಮತ್ತು ಕೊಪ್ಪಲುಗಳು ಓಕಳಿಯ ದಿನಕ್ಕೆ ಹತ್ತಿರವಾಗುತ್ತಿದ್ದಂತೆಯೇ ಸಂತಸ, ಸಂಭ್ರಮದ ಹೊಳೆಯಲ್ಲಿ ಮುಳುಗುತ್ತಾರೆ. ಚಾವಡಿಯ ಕಡೆಯಿಂದ ತಮಟೆಯ ದಿಮ್ಮಿಯ ಸದ್ದು, ಯಾರ ಕೈಲಿ ನೋಡಿದರೂ ಓಕಳಿ ಹಂಡೆಯೆ, ಇಲ್ಲಿ ಓಕಳಿ ಹಬ್ಬದ ಸಡಗರ, ಸಿದ್ಧತೆ ಸಹಜವಾಗಿ ಚಿತ್ರಿತವಾಗಿದೆ. ಓಕಳಿ ಹಬ್ಬ ಒಂದು ಸಾಂಸ್ಕೃತಿಕ ಹಬ್ಬವಾದ್ದರಿಂದ, ಪೂಜೆ ಪುನಸ್ಕಾರಗಳೆಲ್ಲ ಹಿಂದಿನಿಂದ ನಡೆದುಕೊಂಡು ಬಂದಿರುವ ನಿಯಮದ ಪ್ರಕಾರವೇ ನಡೆಯುತ್ತವೆ. ಗ್ರಾಮೀಣ ಜನರಲ್ಲಿ ಎಷ್ಟೇ ಅನ್ಯೋನ್ಯತೆ ಇದ್ದರೂ ಸಮಯ ಬಂದಾಗ ಎಂತಹ ನೀಚ ಪ್ರವೃತ್ತಿಗೂ ಇಳಿಯಬಲ್ಲರು ಎಂಬುದನ್ನು ಲೇಖಕರು ಚಿತ್ರಿಸಿದ್ದಾರೆ. ಎಲ್ಲರೂ ತಮ್ಮ ಹಳೆಯ ದ್ವೇಷ, ಮಾತ್ಸರ್ಯಗಳಿಗೆ ಸರಿಯಾದ ಕಾಲವೆಂದು ತಿಳಿದು ನೀರನ್ನು ಬಿಟ್ಟು, ಹಂಡೆಯಲ್ಲಿಯೇ ಬಡಿದಾಡುತ್ತಾರೆ. 'ಬೇಲಿಯೆ ಎದ್ದು ಹೊಲ ಮೇದ ಹಾಗೆ' ಎಂಬ ಗಾದೆಯಂತೆ ಸ್ವತಃ ಚಂದ್ರೇಗೌಡನೇ ದೊಡ್ಡ ರಾಕ್ಷಸನ ಹಾಗೆ ಹೊಡೆದಾಡುತ್ತಾನೆ.

ಹಳ್ಳಿಗರ ಬದುಕಿನಲ್ಲಿ ಜಗಳಗಳನ್ನು ಪಂಚಾಯ್ತಿಯ ಮೂಲಕವೇ ಬಗೆಹರಿಸುತ್ತಾರೆ. ಆದರೆ ಸೋತವರು ಅಸಹಾಯಕ ಸ್ಥಿತಿಯಲ್ಲಿ ಅನಿವಾರ್ಯವಾಗಿ ಪೊಲೀಸರ ಮೊರೆ ಹೋಗುತ್ತಾರೆ. ಹಾಗಾಗಿಯೇ ಶಿವಗಂಗ ಮತ್ತು ಪುಟ್ಟಸ್ವಾಮಿ ಕೊಪ್ಪಲಿನ ನಾಟಕದ ದಿನವೇ ಹಿರಿಯರು ಎಷ್ಟೇ ಹೇಳಿದರೂ ಕೇಳದೆ ಪೊಲೀಸರಿಗೆ ದೂರು ಕೊಡುತ್ತಾರೆ. ಅವರ ಅಂತರಂಗದಲ್ಲಿ ದ್ವೇಷ ಎಷ್ಟಿತ್ತೆಂಬುದನ್ನು ಇದು ಸೂಚಿಸುತ್ತದೆ. ಓಕಳಿಯ ಆಟದ ಮಾರನೆ ದಿನ ಚಂದ್ರೇಗೌಡನೆ ಖುದ್ದಾಗಿ ನಾಟಕದ ಕೆಲಸವನ್ನು ಮಾಡುತ್ತಿರುವಾಗಲೇ ದಿರಸಿನ ಲಾರಿ ಮಂಡ್ಯದಿಂದ ಇನ್ನೇನು ಬರುವ ಹೊತ್ತು, ಕೋಟೆ ಕಡೆಯಿಂದ ಬರುವ ಬಸ್ಸು ಬಂದಿತು. ಸ್ವಲ್ಪ ಹೊತ್ತಲ್ಲೇ ಚಾವಡಿ ಕಡೆಗೆ ನಾಲ್ಕೈದು ಜನ ಪೊಲೀಸರು ಬರುವುದು ಕಂಡ ಎಲ್ಲರಿಗೂ ಉಸಿರು ಸಿಕ್ಕಿಕೊಂಡಂತಾಯಿತು. ಪೊಲೀಸರು ಬಂದು ಮಾವ, ರುದ್ರ ಇಬ್ಬರನ್ನು ಈ ಕೂಡಲೆ ಹೊರಡಬೇಕೆಂದು ಹೇಳಿ ಜೇಬಿನಿಂದ ಕಾಗದವೊಂದನ್ನು ತೋರಿಸಿದರು. ಚಂದ್ರೇಗೌಡರು ಗಾಬರಿಯಾಗಲಿಲ್ಲ. ಅವರು ನಿಧಾನವಾಗಿ ಮಾತನಾಡುತ್ತ ಅರಳಿಕಟ್ಟೆಯ ಮೇಲೆ ಬಂದು ಕೂತು ಸೀತಾರಾಮಯ್ಯನವರನ್ನು ಕರೆತರಲು ಕಳುಹಿಸಿದರು. 'ಹಳ್ಳಿಯಲ್ಲಿನ ಜಮೀನ್ದಾರರು ಕೂಡ ಹೇಗೆ ಪೊಲೀಸರು ಮತ್ತು ನ್ಯಾಯಾಲಯಗಳಿಗೆ ಹೊಂದಿಕೊಂಡಿದ್ದಾರೆ ಎಂಬುದನ್ನು ಜೊತೆಗೆ, ಹಳ್ಳಿಗೆ ಪೊಲೀಸರು ಪ್ರವೇಶ ಮಾಡುವುದರಿಂದ ಮುಗ್ಧಜನಗಳಿಗಾಗುವ ಭಯ, ಆತಂಕಗಳು ಸಹಜವಾಗಿ ಮೂಡಿಬಂದಿದೆ'.

ಈ ಕಾದಂಬರಿಯನ್ನು ಕುರಿತಂತೆ ಜಿ.ಎಸ್. ಅಮೂರರವರು "ಗ್ರಾಮ ಜೀವನವನ್ನು ಹಾಸ್ಯ ಪ್ರಸಂಗಗಳಿಗಾಗಿ ಅಥವಾ ಭಾವುಕ ವಿಜೃಂಭಣೆಗಾಗಿ ಬಳಸಿಕೊಂಡ ಕಾದಂಬರಿಗಳಿಗಿಂತ ತೀರ ಭಿನ್ನವಾದ ಕೃತಿ ಆಲನಹಳ್ಳಿಯವರ 'ಕಾಡು'. ನಾಗರೀಕತೆಯ ಶೋಧದಲ್ಲಿ ಮಾನವ ಬಹುದೂರ ಬಂದಿದ್ದರೂ ಅವನ

ಮೂಲ ಪ್ರವೃತ್ತಿಗಳಾದ, ಕಾಮ, ದ್ವೇಷ, ಕ್ರೌರ್ಯಗಳು ಇನ್ನು ಅದಿಮ ಸ್ಥಿತಿಯಲ್ಲಿಯೇ ಇರುವುದು ಅವನ ಜೀವನದ ದುರಂತ, ಕೊನೆಯಿಲ್ಲದ ಆ ಅವಸ್ಥೆಯನ್ನೇ ಕೊಪ್ಪಲು, ಹೊಸೂರು, ಇಂತಹ ಕಾಡಿನ ಮಧ್ಯದ ಗ್ರಾಮಗಳ ಪರಿಸರದಲ್ಲಿ ನಡೆಯುವ ಕ್ರಿಯೆಯ ಮೂಲಕ ಅಭಿನಯಿಸಿ ತೋರಿಸಿದ್ದಾರೆ'[೨] ಎಂಬ ಮಾತುಗಳು ಕಾದಂಬರಿಯ ಮಹತ್ವವನ್ನು ಅತ್ಯಂತ ಸ್ಪಷ್ಟವಾದ ರೀತಿಯಲ್ಲಿ ವಿವರಿಸುತ್ತವೆ.

'ಪರಸಂಗದ ಗೆಂಡೆತಿಮ್ಮ' ಕಾದಂಬರಿಯು ಇವರ ಇನ್ನಿತರ ಕಾದಂಬರಿಗಳಂತೆಯೇ ಮುಗ್ಧ ಗ್ರಾಮೀಣರ ಬದುಕನ್ನೇ ವಸ್ತುವನ್ನಾಗಿ ಒಳಗೊಂಡಿದೆ. ಮೈಸೂರಿನ ಸುತ್ತಮುತ್ತ ಇರುವ ಸಾಲುಂಡಿ, ಗೌವ್ವಳ್ಳಿ ಮತ್ತು ನಂಜನಗೂಡಿನ ಪಕ್ಕವಿರುವ ಉಳಿಮಾವು ಮುಂತಾದ ಊರುಗಳ ಬದುಕು ಚಿತ್ರಿತವಾಗಿದೆ. ಪರಿವಾರ ಜನಾಂಗದ ಸುತ್ತಮುತ್ತ ಹರಡಿಕೊಂಡಿರುವ ಈ ಕಾದಂಬರಿ, ಈ ಜನವರ್ಗದ ಆಚಾರ ವಿಚಾರಗಳು, ಸಂಪ್ರದಾಯ ಅವರು ನಂಬಿದ್ದ ಮೌಲ್ಯಗಳು ಮುಂತಾದ ಸೂಕ್ಷ್ಮ ವಿವರಗಳನ್ನು ಕಟ್ಟಿಕೊಡುತ್ತದೆ.

"ಹಿಂದುಳಿದ ಹಳ್ಳಿಯೊಂದರ ಪ್ರಾಚೀನ ಬದುಕಿಗೆ ಗೆಂಡೆತಿಮ್ಮ-ಮರಂಕಿಯರು ಪರಿಚಯಿಸಿದ ನಾಗರೀಕ ವಸ್ತುಗಳು ಮತ್ತು ಅವರ ಮುಗ್ಧ ಕ್ರಿಯೆಗಳು ದುರಂತವೆನಿಸಿದರೂ ಅನಿವಾರ್ಯ ವಿಕಾಸಕ್ಕೆ ಕಾರಣವಾದಂತೆ ಅವರಿಬ್ಬರ ವೈಯಕ್ತಿಕ ಜೀವನವನ್ನು ಬಲಿ ತೆಗೆದುಕೊಂಡುಬಿಟ್ಟವು"[೩]. ಇಲ್ಲಿ ಕಾದಂಬರಿಕಾರರು ಕೃತಿಯ ರಚನೆಗೆ ಮುಖ್ಯ ಪ್ರೇರಣೆಯನ್ನು ಖಚಿತವಾಗಿಯೇ ತಿಳಿಸಿದ್ದಾರೆ. ವಾಸ್ತವವಾಗಿ ಯಾವುದೇ ನಾಗರೀಕತೆಯ ಗಂಧವಿಲ್ಲದ ಕುಗ್ರಾಮವೊಂದಕ್ಕೆ ನಾಗರಿಕ ವಸ್ತುಗಳು ಪ್ರವೇಶಿಸಿದ ನಂತರ ಆ ಪರಿಣಾಮವಾಗಿ ಇಡೀ ಊರೇ ತಲ್ಲಣಿಸಿ, ಬದುಕು ಅಸ್ತವ್ಯಸ್ತ ಸ್ಥಿತಿಗೆ ತಲುಪಿ, ಈ ಬದಲಾವಣೆಗೆ ಕಾರಣರಾದ ಗೆಂಡೆತಿಮ್ಮ ಮತ್ತು ಮರಂಕಿಯರು ದುರಂತ ಸಾವನ್ನಪ್ಪುವ ಇಲ್ಲಿನ ವಿವರಗಳ ಬಗ್ಗೆ ಮರುಕ ಹುಟ್ಟುತ್ತದೆ.

'ಪರಸಂಗದ ಗೆಂಡೆತಿಮ್ಮ' ಕಾದಂಬರಿಯ ಪರಿಕಲ್ಪನೆಯೇ ಜನಪದ ಕಥೆಯ ರೀತಿಯಲ್ಲಿ ಕಂಡುಬಂದು ಇಡೀ ಕೃತಿಯು ಅದೇ ರೀತಿಯಲ್ಲಿ ಸಾಗುತ್ತದೆ. ಗೆಂಡೆತಿಮ್ಮ ಒಬ್ಬ ಮುಗ್ಧ ಜನಪದ ಸಮಾಜದ ವ್ಯಕ್ತಿಯಾಗಿ ರೂಪುಗೊಂಡಿದ್ದಾನೆ. ಈತ ಅದ್ಭುತವಾದ ಕಥೆಗಾರ ಮತ್ತು ಕಲೆಗಾರನೂ ಆಗಿರುವುದನ್ನು ಕಾದಂಬರಿಯಲ್ಲಿ ಕಾಣಬಹುದು. ಮುಗ್ಧ ಮತ್ತು ಅವನ ಪರಿವಾರಕ್ಕೆ ಈತ ಹೇಳುವ 'ಬಿದಿರಾಳ ಚೆಲುವೆ' ಕಥೆ, ರಾಜಕುಮಾರರ ಕಥೆಗಳು ಇದನ್ನು ಸಾಬೀತುಪಡಿಸುತ್ತದೆ. ಇವನು ರತ್ನವ್ವನ ಮದುವೆಯ ಚಪ್ಪರ ಕಟ್ಟುವಾಗ ಆ ಊರಿನ ಸೂರಪ್ಪಾಚಾರಿಯೇ ಇವನ ಚಿತ್ರಗಾರಿಕೆಗೆ ಬೆರಗಾಗಿ ಮೆಚ್ಚುಗೆ ವ್ಯಕ್ತಪಡಿಸುತ್ತಾನೆ ಜೊತೆಗೆ ಕಾದಂಬರಿಯ ತಲೆಬರಹವೆ ಸೂಚಿಸುವಂತೆ 'ಪರಸಂಗ' ಎಂದರೆ ಕಥೆ ಹೇಳುವುದು ಎಂಬರ್ಥಕ್ಕೆ ತಕ್ಕಂತೆ ಗೆಂಡೆತಿಮ್ಮನ ಪಾತ್ರ ರೂಪುಗೊಂಡಿದೆ.

ಪ್ಯಾಟೆಯ ರುಚಿಕಂಡು ನವನಾಗರೀಕತೆಯನ್ನು ರೂಢಿಸಿಕೊಂಡಿದ್ದ ಮರಂಕಿಯನ್ನು ಮದುವೆಯಾಗುತ್ತಾನೆ. ಹಾಗಾಗಿ ಕಾದಂಬರಿಕಾರರು ಮುಂದೆ ನಡೆಯುವ ಎಲ್ಲಾ ಆಗುಹೋಗುಗಳಿಗೆ ಸಂಬಂಧಿಸಿದಂತೆ ಪ್ರಾರಂಭದಲ್ಲೆ ಒಂದು ಸಣ್ಣ ಅನುಮಾನವನ್ನು ಕಾದಂಬರಿಯಲ್ಲಿ ತರುತ್ತಾರೆ. ಮರಂಕಿಯನ್ನು ಮದುವೆಯಾಗುವ ಮುಂಚೆ ಗೆಂಡೆತಿಮ್ಮನಿಗೆ ಅವನ ಅವ್ವ ಮರಂಕಿಯನ್ನು ತೋರಿಸಿದಾಗ 'ಊಂ ಆ ಕೆಂಚಿ ಕಟ್ಕಂಡು ನಾನು ಕಾಲ ಆಕ್ಬಂಗೆ' ಎಂಬ ಅವನ ಅನುಮಾನವಾಗಲಿ, ಮದುವೆಯಾದ ನಂತರ ಮರಂಕಿಯ ಚೆಲುವನ್ನು ಸಹಿಸಲಾರದವರು 'ಈ ಕೆಂಚಿ ತಂದವ್ನಲ್ಲ ಅವಳ ಜೊತೆ ನೀಗಕ್ಕೆ ಆಗದ?' ಎಂಬ ಮಾತುಗಳು, ಗೆಂಡೆತಿಮ್ಮ ಮತ್ತು ಮರಂಕಿಯರ ಬದುಕಿನಲ್ಲಡಗಿರುವ ಸೂಕ್ಷ್ಮತೆಗಳನ್ನು ಸೂಚಿಸುತ್ತವೆ. ಆದರೂ ಗೆಂಡೆತಿಮ್ಮನು ಮರಂಕಿಯ ಮೈಮಾಟಕ್ಕೆ, ಅವಳು ಬಳಸುವ ಸ್ನೋ, ಪೌಡರು, ಗಮನದೆಣ್ಣೆ, ಬಾಡಿ, ಲಂಗ- ಇತ್ಯಾದಿಗಳಿಗೆ ಮಾರುಹೋಗಿ, ಅವಳು ತನ್ನ ಪಾಲಿಗೆ ಲಭಿಸಿದ್ದು ಪುಣ್ಯವೆಂದೇ ಭಾವಿಸುತ್ತಾನೆ. ಅತ್ತೆ ಬೇದಿಯಮ್ಮ ಕೂಡ ಬಂಗಾರದಂತಹ ಸೊಸೆ ಸಿಕ್ಕಳೆಂದು ಮೊದಲಿಗೆ ಭಾವಿಸುತ್ತಾಳೆ, ಆದರೆ ಅವಳು ಬಳಸುವ ವಸ್ತುಗಳು ಹಾಗೂ ವಾರಕ್ಕೆರಡು ದಿನ ಸ್ನಾನ ಮಾಡುವುದು, ಸಾರಿಗೆ ಒಗ್ಗರಣೆ ಹಾಕುವುದು, ಇವು ನಮ್ಮ ಮಟ್ಟಕ್ಕಲ್ಲ. ಇದೇನಿದ್ರು 'ಹಾರುವ'ರಿಗೆ ಮಾತ್ರ. ಈ ಬಡಿವಾರದ ರೀತಿಯಲ್ಲಿ ಬದುಕಿದರೆ ಮನೆ ಹಾಳಗುತ್ತದೆ-ಎಂದು ಅವಳು ಭಾವಿಸುತ್ತಾಳೆ. ಜೊತೆಗೆ ಮರಂಕಿಯು ತನ್ನ ಹಿರಿಯ ಸೊಸೆಯ ಹಾಗೆ ತನ್ನ ಅತ್ತೆತನಕ್ಕೆ ಒಗ್ಗದ್ದಕ್ಕೆ ಒಳಗೊಳಗೆ ಕುದಿಯುತ್ತಾಳೆ. ಈ ಎರಡರ ನಡುವೆ ಇಕ್ಕಟ್ಟಿಗೆ ಸಿಕ್ಕಿಕೊಂಡವನು ಗೆಂಡೆತಿಮ್ಮ, ಮರಂಕಿ ಬಳಸುವ ಈ ವಸ್ತುಗಳು ಈ ಮನೆಗೆ ಮಾತ್ರವಲ್ಲದೆ ಇವರ ಕೇರಿ ಹಾಗೂ ಊರಿಗೆ ಹೊಸದಾಗಿದ್ದವು-ಎಂದು ಲೇಖಕರು ಹೇಳುವ ಮಾತುಗಳು 'ಸಾಲುಂಡಿಯ ಜನ ನಾಗರೀಕತೆಯ ಗಂಧದಿಂದ ದೂರವಾಗಿರುವುದನ್ನು ಪರಿಚಯಿಸುತ್ತಾರೆ'. ಮರಂಕಿ ನಾಜೂಕಿನವಳಾಗಿದ್ದರೂ ಮನೆಯವರೊಡನೆ ಹೊಂದಿಕೊಳ್ಳಲು ಪ್ರಯತ್ನಿಸುತ್ತಾಳೆ. ಅದನ್ನು ಗೆಂಡೆತಿಮ್ಮನ ಅಣ್ಣನ ಮಗಳು ಚೆನ್ನಂಜಿಯ ತಲೆ ಈಗ ದಿನವೂ ಎಣ್ಣೆ ಕಾಣುವುದಷ್ಟೆ ಅಲ್ಲ ಮರಂಕಿಯ ಬಾಚಣಿಗೆಯಿಂದ ಹದವಾಗಿತ್ತು. ಅಲ್ಲಿ ಮಂದೆ ಹೂಡಿದ್ದ ಹೇನುಗಳು ಕಡಿಮೆಯಾಗತೊಡಗಿದ್ದವು ಎಂಬ ಮಾತುಗಳು ಸ್ಪಷ್ಟಪಡಿಸುತ್ತವೆ. ಇಲ್ಲಿ ಮರಂಕಿ ನಾಜೂಕಾಗಿ ಬದುದುವುದರ ಜೊತೆಗೆ ತನ್ನ ಗಂಡನ ಮನೆಯನ್ನು ಸುಧಾರಿಸಲು ಪ್ರಯತ್ನಿಸುವುದನ್ನು ಮೆಚ್ಚಬಹುದಾಗಿದೆ. ಆದರೆ ಭೇದಿಯಮ್ಮ ಮಾತ್ರ ಮರಂಕಿಯ ಈ ರೀತಿಯ ನಡವಳಿಕೆಗಳನ್ನು ನಿಗ್ರಹಿಸಲಿಕ್ಕೆ ಆಗದ್ದಕ್ಕೆ ಒಳಗೊಳಗೆ ಕುದಿಯುತ್ತಾಳೆ. 'ಇಲ್ಲಿ ಲೇಖಕರು ಹೊಸ ಬದುಕಿನ ವಿಕಾಸವನ್ನು ನಿಗ್ರಹಿಸಲಾರದ್ದನ್ನು ಸಹಜವಾಗಿ ಚಿತ್ರಿಸಿದ್ದಾರೆ'. ಮರಂಕಿ ಬೆಳಗ್ಗೆ ಮುಖ ತೊಳೆದು ತಲೆ, ಬಾಚಿಕೊಂಡೇ ಇಲ್ಲಾ ಕೆಲಸಗಳಿಗೂ ತೊಡಗುವುದು, ವಾರಕ್ಕೆ ಎರಡು ಸಲವಾದರೂ ಸ್ನಾನ ಮಾಡುವುದು, ಮಾಸಿದ ಸೀರೆ ಬಟ್ಟೆಗಳನ್ನು ಅತ್ತೆ ಮತ್ತು ವಾರಗಿತ್ತಿಯಂತೆ ಚೌಳು ಮಣ್ಣಿನಲ್ಲಿ ಒಗೆಯದೆ ಸಾಬೂನಿನಿಂದಲೇ ಒಗೆಯುವುದು, ತಲೆಗೆ ಕೈಯೆಣ್ಣೆಗೆ ಬದಲಾಗಿ ಗಮನದ ಎಣ್ಣೆ, ಒಳಗಿನ ಲಂಗ ಕಾಣುವಂತಹ ತೆಳ್ಳನೆಯ ಸೀರೆ, ಒಂದೊಂದು ಸಲ ಜಡೆ ಹಾಕಿಕೊಂಡು ಅದಕ್ಕೆ ಬಣ್ಣದ ಟೇಪು ಕಟ್ಟಿಕೊಳ್ಳುವುದು- ಈ ಕ್ರಮಗಳು ಆ ಮನೆಗೇನು, ಊರಿಗೂ ಸಾಕಷ್ಟು ಹೊಸದಾಗಿದ್ದವು. ಇವುಗಳೆಲ್ಲವನ್ನು

ಗೆಂಡೆತಿಮ್ಮನು ಅವ್ವನಿಗೆ ಕಾಣದಂತೆ ಹೆಂಡತಿಗೆ ತಂದುಕೊಡುತ್ತಿದ್ದನು. ಇಲ್ಲಿ ಗೆಂಡೆತಿಮ್ಮ ಹೆಂಡತಿಯ ಬೇಕು–ಬೇಡಗಳನ್ನು ಅರಿತುಕೊಳ್ಳುವ ಮತ್ತು ತನ್ನ ಅವ್ವನನ್ನು ಗೌರವಿಸುವ ಸಹಜ ವ್ಯಕ್ತಿಯನ್ನಾಗಿ ಚಿತ್ರಿಸಿದ್ದಾರೆ. ಜೊತೆಗೆ 'ನಾಗರೀಕ ಸಂವೇದನೆಗಳಿಗೆ ಈ ಎಲ್ಲ ಅಡೆತಡೆಗಳನ್ನು ಮೀರಿ ಆಕರ್ಷಿಸುವಂತಹ ಶಕ್ತಿ ಇರುವುದನ್ನು ಗುರುತಿಸಿದ್ದಾರೆ'. ಇವುಗಳನ್ನೆಲ್ಲ ನೋಡಿ ಸುಮ್ಮನಿರಲು ಆಗದ ತಾಯಿಯ ಮನಸ್ಥಿತಿಯನ್ನು ಲೇಖಕರು "ಬೇದಿಯಮ್ಮನಿಗೆ ಯಾಕೊ ಕಿರಿಯ ಸೊಸೆಗೆ ಸೋತೆ ಎಂಬ ಅನುಮಾನ ಕಾಡತೊಡಗಿತು, ಇವಳನ್ನು ಹತೋಟಿಯಲ್ಲಿಟ್ಟುಕೊಂಡು ವಗತನ ಮಾಡುವುದು ಆಗದ ಮಾತು"[6] ಎಂಬುದರ ಮೂಲಕ ಚಿತ್ರಿಸಿದ್ದಾರೆ. ಇಲ್ಲಿ ಹಳ್ಳಿಯ ಅತ್ತೆಯರು ತಮ್ಮ ಸೊಸೆಯರ ಮೇಲೆ ಅಧಿಕಾರ ಚಲಾಯಿಸಿ ಅವರನ್ನು ಹಿಡಿತದಲ್ಲಿ ಇಟ್ಟುಕೊಳ್ಳಲು ಪ್ರಯತ್ನಿಸುವುದು ಹಾಗೂ ಆ ಹಿಡಿತ ತಪ್ಪಿದಂತಾದಾಗ ಚಿಂತೆಗೀಡಾಗುವುದನ್ನು ಲೇಖಕರು ಸಹಜವಾಗಿ ಚಿತ್ರಿಸಿದ್ದಾರೆ. 'ಸುಣ್ಣವನ್ನು ಕೊಟ್ಟರೂ ಬೆಣ್ಣೆಯೆಂದ ನುಂಗುತ್ತಿದ್ದವನೂ, ಬಸವಣ್ಣನಂಥವನೂ, ಆದ ತನ್ನ ಮಗ–ಈಗ ಹೆಂಡತಿಯ ತಾಳಕ್ಕೆ ತಕ್ಕಂತೆ ಕುಣಿಯುತ್ತಿದ್ದಾನೆಂದು ಹೇಳಿಕೊಂಡು ಬೇದಿಯಮ್ಮ ವ್ಯಥೆಪಡುವ ದೃಶ್ಯ ಸಹಜವಾಗಿ ಬಂದಿದೆ. ಗೆಂಡೆತಿಮ್ಮ ಇಲ್ಲಿ ತಾನು ಕೈಹಿಡಿದ ಹೆಂಡತಿ ಮತ್ತು ತನ್ನನ್ನು ಹೆತ್ತು ಹೊತ್ತು ಸಾಕಿದ ಅವ್ವ ಇವರಿಬ್ಬರ ನಡುವೆ ಕತ್ತರಿಗೆ ಸಿಕ್ಕಿದ ಅಡಕೆಯಂತಾಗುತ್ತಾನೆ. ಈಚೀಚೆಗೆ ಸ್ವಚ್ಛವಾಗಿರುತ್ತಿದ್ದ ಇವನು ಹೆಂಡತಿಗೆ ಬೇಕಾದ್ದೆಲ್ಲವನ್ನು ತಂದುಕೊಡುತ್ತಿದ್ದ ತಾಯಿ "ತಂದ್ಕೊಡು, ತಂದ್ಕೊಡು, ನಾಯಕಸಾನಿ ಕೇಳಿದ್ದೆಲ್ಲ ತಂದ್ಕೊಡು, ಈ ಮನೆ ಉದ್ಧಾರ ಮಾಡಕ್ಬಂದವಳ ಇವ್ಳು? ಎಲ್ಲಾನೂ ಗುಡ್ಸಿ ಗುಂಡಾಂತರ ಮಾಡ್ಬುಡ್ತಾಳೆ ಚಿನಾಲಿ" ಎನ್ನುತ್ತಾಳೆ. ಗೆಂಡೆತಿಮ್ಮ ವ್ಯಾಪಾರಕ್ಕೆ ಹೋಗಿದ್ದಾಗ ಮರಂಕಿಗೆ ಬೇದಿಯಮ್ಮ ಹಿರಿಯ ಮಗನಾದ ಗೂಳನಾಯಕನಿಂದ ಹೊಡೆಸಿರುತ್ತಾಳೆ. ಈ ವಿಷಯ ತಿಳಿದ ಗೆಂಡೆತಿಮ್ಮನಿಗೆ ಹೆಂಡತಿಯ ಮೇಲೆ ಕನಿಕರ ಮೂಡುತ್ತದೆ. ಆ ಭರದಲ್ಲಿ ಅದಕ್ಕೆ ಪ್ರಮುಖ ಕಾರಣಳಾದ ಅವನನ್ನು ಚೆನ್ನಾಗಿ ಬೈಯ್ಯುತ್ತಾನೆ. 'ಲೇ ಮುದ್ಕಿ ಸಾಕು ನಿಲ್ಸು ನಿನ್ನ ಕಿರುಚಾಟ ಎಂದು ಕೂಗಿದ'. ಇಲ್ಲಿ ಬೇದಿಯಮ್ಮ ಹೆತ್ತ ಮಗನಿಂದ ಅಪಮಾನಿತಳಾದಾಗ ಅನುಭವಿಸುವ ನೋವನ್ನು ಸ್ಪಷ್ಟವಾಗಿ ಕಾಣುತ್ತೇವೆ.

ಆಲನಹಳ್ಳಿಯವರು ಮರಂಕಿಯನ್ನು ನಾಗರೀಕ ಬದುಕಿಗೆ ತುಡಿಯುವ ಜೀವವಾಗಿ ಭಿನ್ನವಾಗಿ ಚಿತ್ರಿಸುತ್ತಾರಾದರೂ ಅವಳು ಗ್ರಾಮೀಣ ಸಮಾಜದಲ್ಲಿ ಅತ್ತೆ ಕಾಟದಿಂದ ಸೊಸೆಯರು ಅನುಭವಿಸುವ ಹಿಂಸೆ, ಅಪಮಾನ, ವಾರಗಿತ್ತಿಯರ ಜಗಳ, ಭಾವನ ಬೈಗುಳಗಳನ್ನು ತಾಳ್ಮೆಯಿಂದ ಸಹಿಸಿಕೊಳ್ಳುವ ಸೊಸೆಯಾಗಿಯೂ ಕಂಡುಬರುತ್ತಾಳೆ. ಜೊತೆಗೆ ಗಂಡನ ಸ್ಥಿತಿಯನ್ನು ಅರಿಯುವಂತಹ ಹೆಂಡತಿಯೂ ಆಗಿದ್ದಾಳೆ.

ನಾಗರೀಕತೆಯ ಸೋಂಕಿನಿಂದ ಗ್ರಾಮೀಣ ಬದುಕು ಪಡೆದುಕೊಳ್ಳುವ ಅನಿವಾರ್ಯವಾದ ತಿರುವು ಮತ್ತು ಬೆಳವಣಿಗೆಗಳು ಸಾಲುಂಡಿಯ ಸಂದರ್ಭದಲ್ಲಿಯೂ ಆಗುವುದನ್ನು ಕಾಣಬಹುದು. ಗೆಂಡೆತಿಮ್ಮ ತನ್ನ ಹೆಂಡತಿ ಬಳಸುತ್ತಿದ್ದ ಪ್ಯಾಟೆಯ ವಸ್ತುಗಳಿಂದ ಮನೆಯಲ್ಲಿ ಉಂಟಾದ ಜಗಳವನ್ನು ದೇವಿರಪ್ಪನಿಗೆ

ವಿವರಿಸಿದಾಗ-ಅವಳು 'ನಿನ್ನ ಹೆಂಡತಿಯದೆ ತಪ್ಪು' ಎಂದು ಅಭಿಪ್ರಾಯಪಡುತ್ತಾಳೆ. ತಮ್ಮ ಮನೆಯಲ್ಲೂ ಗೌಡರು ಮತ್ತು ಮಕ್ಕಳ ಬಟ್ಟೆಗೆ ಮಾತ್ರ ಸೋಪು ಹಚ್ಚುವುದನ್ನು ಹೇಳಿ "ಗೌವ್ವಳ್ಳಿಯಲ್ಲಿ ಚಾಟಿ ಸಾಬಿ ಹೆಂಡತಿ ಬೂಬಮ್ಮ ಒಬ್ಬಳನ್ನು ಬಿಟ್ಟು ಅಷ್ಟೇಕೆ ಅಂಯ್ನೋರ ಮನೆ ಹೆಂಗಸರೂ ಸೇರಿ ಯಾರೂ ಲಂಗ, ಬಾಡಿ ಹಾಕುತ್ತಿರಲಿಲ್ಲ"[೧೦]. ಇಲ್ಲಿ ಲೇಖಕರು ಮುಸ್ಲಿಂ ಜನಾಂಗವು ಹಳ್ಳಿಯ ಗೌಡರು ಮತ್ತು ಐಯ್ನೋರಿಗಿಂತಲೂ ನಾಗರೀಕ ಬದುಕಿಗೆ ಬೇಗ ಹೊಂದಿಕೊಳ್ಳುವುದನ್ನ ಗುರುತಿಸಿದ್ದಾರೆ. ಜೊತೆಗೆ ಗೌವ್ವಳ್ಳಿಯ ಹಳೆ ತಲೆಮಾರಿನ ಜನಾಂಗವೂ ನಗರದ ಬದುಕಿನ ಸೆಳೆತಕ್ಕೆ ಆಕರ್ಷಿತವಾಗುವುದನ್ನು ಪಡುವಾರಳ್ಳಿಯಿಂದ ರತ್ನಿಯನ್ನು ನೋಡಲು ಬಂದಿದ್ದವರು ಹೆಣ್ಣನ್ನು ನೋಡಿ 'ಬಂಗಾರದಂಗದೆ ಹೆಣ್ಣೇನೊ, ಆದ್ರೆ ಒಂದಿಷ್ಟು ನಾಜೂಕಾಗಿ ಬಟ್ಟೆ ಬರೆ ಆಕಳಕ್ಕೇಳಿ, ನಮ್ಮೈದ ವಸಿ ಒದ್ದೋನು' ಎಂಬ ಮಾತಿನಿಂದ ದೇವಿರವ್ವ ಗೆಂಡೆತಿಮ್ಮನಿಗೆ 'ಪ್ಯಾಟೆ ಯೆಂಗಸ್ರು ಆಕಳದ್ನೆಲ್ಲಾ ನಮ್ಮ ರತ್ನಿಗೂ ನಾಡಿದ್ದೂ ಬರಾಗ ತಕ್ಕಂಬಾ' ಎಂದು ಹೇಳುವುದಲ್ಲದೆ ಈ ಸಂಬಂಧ ಕೂಡಿ ಬಂದರೆ ಮಾರಮ್ಮನಿಗೆ ಜೋಡಿ ಕೋಳಿ ಬೇಟೆಯನ್ನು ಕೊಡಲು ಹರಕೆಯನ್ನು ಕಟ್ಟಿಕೊಳ್ಳುತ್ತಾಳೆ. 'ಇಲ್ಲಿ ದೇವಿರವ್ವ ಮಗಳು ಮೈಸೂರಿನಲ್ಲಿ ಸುಖವಾಗಿ ಬದುಕಬಹುದೆಂಬ ಆಸೆಯಿಂದ ಹಳ್ಳಿಯ ಸಂಪ್ರದಾಯಕ್ಕೆ ಅಂಟಿಕೊಂಡವಳಾಗಿದ್ದರೂ, ಆ ಸೆಳೆತಕ್ಕೆ ಒಳಗಾಗುವುದು, ಮಾಲೇಗೌಡರು ಸಹ ಇದಕ್ಕೆ ಸಮ್ಮತಿಸುವ ಮನಸ್ಥಿತಿಯನ್ನು' ಚಿತ್ರಿಸುವ ಮೂಲಕ ಲೇಖಕರು ಆಧುನಿಕ ಬದುಕಿನ ಸೆಳೆತಗಳ ಮಹತ್ವವನ್ನು ಗುರುತಿಸುತ್ತಾರೆ.

ಗೆಂಡೆತಿಮ್ಮನು ಸಾಲುಂಡಿಯಲ್ಲಿ ದೊಡ್ಡವರಿಂದ ಹಿಡಿದು ಚಿಕ್ಕವರ ತನಕ ಪ್ರೀತಿ ಹಾಗೂ ಕುತೂಹಲದ ವ್ಯಕ್ತಿಯಾಗಿದ್ದಾನೆ, ಸಾಲುಂಡಿಯ ಹೆಂಗಸರ ಎಲೆ ಅಡಿಕೆ ಮೊದಲುಗೊಂಡು ಬೀಡಿ ಬೆಂಕಿಪೊಟ್ಟಣ, ಮಕ್ಕಳ ಸಣ್ಣ ಪುಟ್ಟ ತಿಂಡಿ, ಸೀಮೆಎಣ್ಣೆ ಕುಪ್ಪಿ ಮುಂತಾದವುಗಳನ್ನು ತಂದುಕೊಡುವ ಇವನು ಊರಿಗೆ ಅನಿವಾರ್ಯವಾಗಿ ಬೇಕಾದ ಸಂಗಾತಿಯಾಗಿದ್ದಾನೆ. ಅದರಲ್ಲೂ ಸ್ಕೂಲೆಂದರೆ ಆಗದಿದ್ದ ಮುದ್ದನಿಗೆ ಗೆಂಡೆತಿಮ್ಮನು ಹೇಳುವ ಕಥೆಗಳು ಅವನನ್ನು ಹೆಚ್ಚು ಪ್ರೀತಿಸುವಂತೆ ಮಾಡುತ್ತದೆ. ಲಂಗ, ಬಾಡಿ. ಸ್ನೋ, ಪೌಡರು ಮುಂತಾದ ವಸ್ತುಗಳನ್ನೆಲ್ಲ ಗೆಂಡೆತಿಮ್ಮನಿಂದ ತರಿಸಿಕೊಳ್ಳುವ ಊರ ಹೆಣ್ಣುಮಕ್ಕಳು ಮತ್ತು ಹೊಸ ಸೊಸೆಯರ ಪಾಲಿಗೆ ಆತನೊಬ್ಬ ಸಾಕ್ಷಾತ್ ಗಂಧರ್ವನಂತೆ ಕಂಡುಬರುತ್ತಾನೆ. ಹೀಗಾಗಿ ಗೆಂಡೆತಿಮ್ಮ ಮತ್ತು ಮರಂಕಿಯರು ಸಾಲುಂಡಿಯ ಹೊಸ ತಲೆಮಾರಿನ ಜನರ ಪಾಲಿಗೆ ಕುತೂಹಲಪೂರ್ಣ, ಆಕರ್ಷಕ ವ್ಯಕ್ತಿಗಳಾಗಿ ಕಂಡುಬರುತ್ತಾರೆ.

ನಾಗರೀಕ ಬದುಕಿನ ಸೆಳೆತಗಳು ಸಹಜವಾಗಿಯೇ ಅವಿಭಕ್ತ ಕುಟುಂಬಗಳನ್ನು ವಿಭಜಿಸುತ್ತವೆ. ಹಾಗಾಗಿ ಇಲ್ಲಿ ಗೆಂಡೆತಿಮ್ಮ ಒಟ್ಟು ಕುಟುಂಬದಲ್ಲಿ ಇದ್ದಾಗ ಜಗಳ, ಹಿಂಸೆ, ಅಪಮಾನದ ಸ್ಥಿತಿಗತಿಗಳನ್ನು ಅನುಭವಿಸಿ ಸಹಿಸಲಾರದೆ ಅಣ್ಣನಿಂದ ಬೇರೆಯಾಗುತ್ತಾನೆ. ಅವರ ಆಸ್ತಿಯು ಊರಿನ ಮುಖ್ಯಸ್ಥರ ಸಮ್ಮುಖದಲ್ಲಿ ಪಾಲಾಗುವ ಚಿತ್ರಣ ಸಹಜವಾಗಿ ಬಂದಿದೆ. ಬೇರೆಯಾದ ಮೇಲೆ ಮರಂಕಿಯ ಜೀವನೋತ್ಸಾಹ ಅಧಿಕವಾಗುತ್ತದೆ. ಹಿಂದೆ ಗಂಡನ ಮನೆಯಲ್ಲಿ ತನಗೆ ಇಷ್ಟ ಬಂದ ಹಾಗೆ ಇರಲು

ಸಾಧ್ಯವಾಗದ್ದರಿಂದ ಅಲ್ಲಿಗೆ ಬರಲು ಹಿಂಜರಿಯುತ್ತಿದ್ದ ಮರಂಕಿಯು ತವರಿನಲ್ಲಿದ್ದಾಗ ಮನೆಯು ಪಾಲಾದ ವಿಷಯ ಕೇಳಿ ಎಷ್ಟು ಬೇಗ ಸಾಲುಂಡಿಯನ್ನು ತಲುಪುತ್ತೇನೊ ಎಂದು ಊರಿನಿಂದ ಬೇಗ ಬೇಗನೆ ಹೊರಟು ಬರುತ್ತಾಳೆ. ಮುಕ್ತ ಹಾಗೂ ಸ್ವತಂತ್ರ ಬದುಕಿನ ಆಕರ್ಷಣೆಯು, ಅವಿಭಕ್ತ ಕುಟುಂಬಕ್ಕಿಂತಲೂ ಚಿಕ್ಕ ಕುಟುಂಬದಲ್ಲಿ ಹೆಚ್ಚಾಗಿರುವುದನ್ನು ಕಾಣಬಹುದು. ವಾಸ್ತವವಾಗಿ ಮರಂಕಿಯ ಅಪ್ಪನೇ ಗೆಂಡೆತಿಮ್ಮನಿಗೆ ಬೇರೆಯಾಗಲು ಸೂಚನೆ ಕೊಟ್ಟಿರುತ್ತಾನಾದರೂ, ಇವರು ಬೇರೆಯಾದಾಗ ಆತನು ಅದನ್ನೆಲ್ಲ ಬಚ್ಚಿಡುವ, ಲೋಕ ಮೆಚ್ಚಿಸುವ ಮಾತುಗಳನ್ನು ಆಡುವುದನ್ನು ಕಾಣುತ್ತೇವೆ. 'ನೋಡಿ ಸುದ್ದಿ ಕೇಳಿ ನಂಗೂ ತುಂಬಾ ಬೇಜಾರಾಯ್ತು, ನೀವಾದ್ರು ಒಂದ್ಮಾತು ನಂಗೇಳಿ ಕಳಿಸಬ್ಯಾಡ್ದಿತ್ತಾ? ಇಬ್ರು ಒಂದಾಗಿದ್ರೆ ನಮ್ಗೇನು ಕಣ್ಣುರಿಯಾಗುತ್ತ? ಏನೊ ಗೊತ್ತಿಲ್ದವ್ರು ನಾಕು ಬುದ್ಧಿ ಮಾತೇಳಿ ಬಾಯ್ಮುಚ್ಕಂಡು ಮರ್‍ವಾದಿಯಿಂದ ಇರಂಗ್ಮಾಡ್ದೆ ಅವ್ನು ಪಾಲಾಗ್ಬೇಕು ಅಂದ್ರೆ ನೀ ಊಂ ಅಂದ್ಬುಡದ?' ಈ ಮಾತುಗಳಲ್ಲಿ ಗ್ರಾಮೀಣ ಜನರ ವ್ಯವಹಾರ ಜ್ಞಾನವನ್ನು ಗುರುತಿಸಬಹುದು.

ಸಾಲುಂಡಿಯಲ್ಲಿ ರತ್ನಾಳು ಧರಿಸುತ್ತಿದ್ದ ಪೇಟೆಯವರ ವಸ್ತುಗಳ ಆಕರ್ಷಣೆಯನ್ನು ತಾಳಲಾರದೆ ಇಡೀ ಊರಿನ ಹೊಸ ಸೊಸೆಯರು, ಮೈನೆರೆದ ಹೆಣ್ಣುಮಕ್ಕಳು ಗೆಂಡೆತಿಮ್ಮನಿಂದ ಹಿರಿಯರು ಕಾಣದ ಹಾಗೆ ತಾವೂ ತರಿಸಿಕೊಳ್ಳುತ್ತಾರೆ. ಪಾಪ ಪ್ರಾಯದವರ ಆಸೆ ಮುದಿಗೊಡ್ಡುಗಳಿಗೇನು ಗೊತ್ತಾಗುತ್ತದೆ ಅಂತ ಅಂದುಕೊಂಡವನೆ ಯಾವ ತಳಮಳವೂ ಇಲ್ಲದೆ ತಂದಿದ್ದನ್ನೆಲ್ಲ ಮುಟ್ಟಿಸಿ ಜೊತೆಗೆ ಐದು ಮನೆಯ ಸೊಸೆಯರ ಬೇಡಿಕೆಗಳನ್ನು ಪೂರೈಸುವ ಭರವಸೆಯನ್ನು ಕೊಟ್ಟುಬರುತ್ತಾನೆ. ಗೆಂಡೆತಿಮ್ಮನಿಗೆ ವಾಸ್ತವವಾಗಿ ನಾಗರೀಕತೆಯ ಕೆಡುಕಿನ ಬಗ್ಗೆ ತುಂಬಾ ಅಳುಕು ಇರುತ್ತದೆ. ಆದ್ದರಿಂದಲೇ ಮರಂಕಿಯ ನಡವಳಿಕೆಗೆ ಇವನು ಒಮ್ಮೊಮ್ಮೆ ಸಿಡುಕಿಕೊಳ್ಳುತ್ತಾನೆ. ಇಲ್ಲಿ ಗೆಂಡೆತಿಮ್ಮನು ಒಂದು ರೀತಿಯ ಗೊಂದಲದಲ್ಲಿ ಸಿಕ್ಕಿ ಆತಂಕದಲ್ಲಿರುವುದನ್ನು ಕಾಣುತ್ತೇವೆ. ಇವನ ಈ ಕ್ರಿಯೆಗಳಿಗೆ ಮರಂಕಿಯು ಆದರ್ಶಳಾಗುವುದಲ್ಲದೆ ಅವಳ ಪ್ರೋತ್ಸಾಹ ದೊರೆಯುತ್ತದೆ. ಅವಳು ಖುದ್ದಾಗಿ ಮೈಸೂರಿಗೆ ಬಂದು ಸಾಲುಂಡಿಯ ಹೆಣ್ಣುಮಕ್ಕಳ ಬೇಕು, ಬೇಡಗಳೆಲ್ಲವನ್ನು ಅರಿತು ಆ ವಸ್ತುಗಳನ್ನು ಕೊಂಡುಕೊಡುತ್ತಾಳೆ. ಈ ರೀತಿಯ ವ್ಯಾಪಾರದಿಂದ ಗೆಂಡೆತಿಮ್ಮ ಸಾಕಷ್ಟು ಪ್ರಗತಿ ಸಾಧಿಸಿದ್ದನ್ನು ಲೇಖಕರು 'ತನ್ನ ವ್ಯಾಪಾರ ಇಷ್ಟು ಬೇಗ ಹೀಗೆ ಚಿನ್ನದ ಮೊಟ್ಟೆ ಇಡಲು ತೊಡಗಿದ್ದು ಮರಂಕಿಯ ಕಾಲುಗುಣದಿಂದಲೆ ಎಂಬ ಅಭಿಪ್ರಾಯಕ್ಕೆ ಗೆಂಡೆತಿಮ್ಮ ಒಳಗಾಗಿದ್ದ' ಎಂಬ ಮಾತಿನಲ್ಲಿ ಗುರುತಿಸಬಹುದು. ನಾಗರೀಕತೆಯ ಪ್ರಭಾವದಿಂದ ಮಾನವ ಕೆಲವು ರೀತಿಯ ಪ್ರಗತಿಯನ್ನು ಕಾಣಬಹುದು. ಬದುಕನ್ನು ಸುಧಾರಿಸಬಹುದೆಂಬುದನ್ನು ಗೆಂಡೆತಿಮ್ಮ ಮತ್ತು ಮರಂಕಿ ಪಾತ್ರಗಳ ಮೂಲಕ ಲೇಖಕರು ಸಹಜವಾಗಿಯೇ ವಿವರಿಸಿದ್ದಾರೆ.

ಮರಂಕಿಯು ನಾಗರೀಕ ರೀತಿಯಲ್ಲಿ ಬದುಕಬೇಕೆಂದು ಸದಾ ತುಡಿಯುವವಳಾಗಿದ್ದಾಳೆ. ಇಷ್ಟಿದ್ದರೂ ಇಡೀ ಮನೆಯನ್ನು ಸುಧಾರಿಸಲು ಪ್ರಯತ್ನಿಸಿ ಸೋಲುತ್ತಾಳೆ. ಮರಂಕಿಯ ಗಾಢ ವ್ಯಕ್ತಿತ್ವವೆಂದರೆ ಅವಳಲ್ಲಿ ಮನೆ ಮಾಡಿರುವ ಗಟ್ಟಿತನ. ಯಾವುದಕ್ಕೂ ಬಗ್ಗದ ಮೇಲ್ಜಾತಿಗೆ ಮಣಿಯದ ಸ್ವಾಭಿಮಾನದ ಹೆಣ್ಣು.

ಗೌವ್ವಳ್ಳಿಯ ಮುದ್ದೇಗೌಡರ ಮನೆಗೆ ಅವಳನ್ನು ಗಂಡ ಕರೆದಾಗ ಆಕೆ ಅಲ್ಲಿಗೆ ಹೋಗುವುದಿಲ್ಲ. ಆ ಊರು ದೂರ ಎನ್ನುವುದಕ್ಕಿಂತ ಮೇಲು ಜಾತಿಯವರು ಕೀಳಾಗಿ, ಅಸಡ್ಡೆಯಾಗಿ ತಮ್ಮನ್ನು ಕಾಣುತ್ತಾರೆ. ಅವರ ಜಗಲಿ ಅಥವಾ ಕೊಟ್ಟಿಗೆಯಲ್ಲಿ ಮಲಗಬೇಕು-ಎಂಬುದನ್ನು ಅರಿತಿದ್ದ ಮರಂಕಿಯ ಇನ್ನೊಂದು ಮುಖವಾದ ಸ್ವಾಭಿಮಾನವನ್ನು ಈ ಘಟನೆಯು ಪರಿಚಯಿಸುತ್ತದೆ. ದೇವಿರವ್ವ ಕೊಟ್ಟಿದ್ದ ತಿಂಡಿಯನ್ನು ಗಂಡ ತನಗೆ ಕೊಟ್ಟಾಗ "ಛೆ...ನಾನೆಷ್ಟು ಹೇಳಿದ್ರು ನೀವು ಕೇಳ್ತೀರ? ನೀವೇನು ಬಿಕ್ಕಸದವರ? ಅವರಿವ್ರ ಮನೆ ಯೆಂಜಲು...ಥೂ.....ನೀವು ತಿಂತಿರ ಅಂದ್ರೆ ನಂಗೇನಂಥ ಗಾಚಾರ? ಎಂದವಳೆ ಮೂಲೆಗೆಸೆದುಬಿಟ್ಟಳು"[10]. ಜಾತಿವ್ಯವಸ್ಥೆಯ ತಾರತಮ್ಯಗಳು ಮರಂಕಿಯ ಮನಸ್ಸಿನ ಮೇಲೆ ಉಂಟುಮಾಡಿರುವ ನೋವಿನ ಎಳೆಗಳನ್ನು ಈ ವಿವರಗಳು ಅತ್ಯಂತ ಸೂಕ್ಷ್ಮವಾಗಿ ವಿವರಿಸುತ್ತವೆ. ಇದಲ್ಲದೆ ಪೇಟೆಯ ಬೀದಿಯಲ್ಲಿ ಮಾರುವ ತಿಂಡಿಯನ್ನು ತಿನ್ನಬಾರದು ಎಂದು ಆಕೆ ಗಂಡನಿಗೆ ತಿಳುವಳಿಕೆ ಹೇಳುವುದು ಮೆಚ್ಚಿಕೊಳ್ಳುವಂತಹದ್ದಾಗಿದೆ. ಇಲ್ಲಿ ಮರಂಕಿಯು ಸ್ವಚ್ಚತೆ ಹಾಗೂ ನಾಗರೀಕ ಸ್ಥಿತಿಗೆ ಹಾತೊರೆಯುತ್ತಿರುವುದನ್ನ ಗಮನಿಸಬಹುದಾಗಿದೆ. ಮರಂಕಿ ಬಯಸಿ ಗ್ರಾಮಫೋನ್ ತರುತ್ತಾಳೆ. ಇದು ಆ ಕೇರಿಗೆ ಮಾತ್ರವೇನು ಇಡೀ ಸಾಲುಂಡಿಗೆ ಹೊಸ ಸಂಗತಿಯಾಗಿರುತ್ತದೆ. ಕೇರಿಯ ಜನರಂತೂ ಗ್ರಾಮಫೋನಿನ ಹಾಡುಕೇಳಿ ಆಶ್ಚರ್ಯ ಸಂತೋಷಗಳಲ್ಲಿ ಮುಳುಗೇಳುತ್ತಾರೆ. ಅದು ಮನುಷ್ಯರು ಮಾತಾಡಿದ ಹಾಗೆ ಮಾತಾಡುವುದನ್ನು ಕಂಡು ವಿಸ್ಮಿತರಾಗುತ್ತಾರೆ. ಮರಂಕಿಯು ಏನೇ ವಸ್ತು ತಂದರೂ ಆ ಊರಿಗೆ ಹೊಸದೇ ಆಗುವುದರಿಂದ ನಾಗರೀಕತೆಯನ್ನು ಪರಿಚಯಿಸುವ ಮಹಿಳೆಯಾಗಿಯೂ ಈಕೆ ಕಂಡುಬರುತ್ತಾಳೆ. ಇವಳು ನಗರದವರಂತೆ ಬೆಳಿಗ್ಗೆ ತಿಂಡಿ ತಿಂದು, ಮಧ್ಯಾಹ್ನ ಊಟ ಮುಂತಾದ ಕ್ರಮಗಳನ್ನು ಅನುಸರಿಸುವುದನ್ನ ಕಂಡು ಗೆಂಡೆತಿಮ್ಮನು-ಇಡೀ ಊರಿನ ಯಾರ ಮನೆಯಲ್ಲೂ ಇಲ್ಲದ, ತನ್ನ ಹೆಂಡತಿಯ ಈ 'ಬೋಮನ' ವನ್ನು ಕಂಡು ಮೊದಮೊದಲು ಕೊಂಚ ರೇಗಾಡುತ್ತನಾದರೂ ಕ್ರಮೇಣ ಅದಕ್ಕೆಲ್ಲ ಹೊಂದಿಕೊಳ್ಳುತ್ತ ಹರ್ಷಚಿತ್ತನಾಗಿ ಇರುತ್ತಾನೆ. ಇವಳು ತಂದಿದ್ದ ಗ್ರಾಮಫೋನಿನಿಂದ ಇಡೀ ಪರಿವಾರದ ಕೇರಿಗೆ ಮಹತ್ವ ಬಂದಿದ್ದನ್ನು 'ಪರಿವಾರದ ಕೇರಿಯ ಜನ ತಮ್ಮ ಕೇರಿಯೂ ಯಾವ ಕೇರಿಗೂ ಕಡಿಮೆಯಿಲ್ಲವೆಂದು ಬಾಯಿಬಿಟ್ಟು ಮಾತಾಡಿದರು' ಎಂಬ ಮಾತುಗಳಲ್ಲಿ ಕಾಣುತ್ತೇವೆ. ಬೇದಿಯಮ್ಮನ ತಿಥಿಯ ದಿನ ಮರಂಕಿ ಜನರು ಕೇಳಲೆಂದು ಗ್ರಾಮಫೋನ್ ಹಾಕಿದಾಗ ಬಂದಿದ್ದವರೆಲ್ಲರೂ ಹಾಡುಕೇಳಿ ಗೆಂಡೆತಿಮ್ಮನನ್ನು, ಮರಂಕಿಯನ್ನು ಹೊಗಳಿಯೇ ಹೊಗಳಿದರು. ಎಲ್ಲರ ಬಾಯಲ್ಲೂ 'ಹೆಣ್ಣು ಅಂದ್ರೆ ಮರಂಕಿ ಹೇಳು' ಎಂಬ ಮಾತುಗಳೂ ನಾಗರೀಕತೆಯು ಮೊದಲಿಗೆ ಗೊಂದಲ, ಅಸ್ತವ್ಯಸ್ತವನ್ನುಂಟು ಮಾಡುವುದು ತೀರಾ ಸಹಜವಾದರೂ ನಂತರ ಕ್ರಮೇಣವಾಗಿ ಅದಕ್ಕೆ ಹೊಂದಿಕೊಳ್ಳುವ ರೀತಿಯನ್ನು ಲೇಖಕರು ಚಿತ್ರಿಸಿದ್ದಾರೆ.

ಗೌವ್ವಳ್ಳಿಯಲ್ಲಿ ಈ ರೀತಿಯಲ್ಲಿ ಬದಲಾವಣೆಯಾದರೆ, ಸಾಲುಂಡಿಯಿಂದ ರತ್ನಮ್ಮ ಮೈಸೂರಿಗೆ ಮದುವೆಯಾಗಬೇಕಾದರೆ ಅನಿವಾರ್ಯವಾಗಿ ಪೇಟೆಯವರು ಬಳಸುವ ವಸ್ತುಗಳನ್ನೇ ಬಳಸಬೇಕಾಗುತ್ತದೆ. ಇಲ್ಲದಿದ್ದರೆ ಮದುವೆಯೇ ನಡೆಯಲಾರದೆಂಬ ಭಯದಿಂದ ತರಿಸಿದ್ದ ಆ ವಸ್ತುಗಳು, ಊರಿನ ಮೈನೆರೆದ ಹೆಣ್ಣುಮಕ್ಕಳು ಮತ್ತು ಹೊಸ ಸೊಸೆಯರನ್ನು ಇನ್ನಷ್ಟು ಆಕರ್ಷಿಸುತ್ತವೆ, ಹಾಗಾಗಿ ಅನೇಕರು

ಗೆಂಡೆತಿಮ್ಮನಿಂದ ಲಂಗ, ಬಾಡಿ, ಸ್ನೋ, ಪೌಡರ್‌ಗಳನ್ನು ತರಿಸಿಕೊಳ್ಳುತ್ತಾರೆ. ಇವು ಇಡೀ ಊರನ್ನೇ ಕಲಕಿಬಿಡುತ್ತವೆ. ವಾಸ್ತವ ಸ್ಥಿತಿಯೆಂದರೆ ಗೆಂಡೆತಿಮ್ಮ ಆ ವಸ್ತುಗಳನ್ನು ತೆಗೆದುಕೊಂಡು ಹೋಗಿ ಕೊಡುವ ವಾಹಕ ಮಾತ್ರವಾಗುತ್ತಾನೆ. ನಿಜವಾದ ಅದರ ಸೆಳೆತ ಸಾಲುಂಡಿಯ ಗರ್ಭದಲ್ಲೇ ಅಡಗಿದೆ. ಆದರೂ ಹಲವಾರು ಹಳೆಯ ತಲೆಗಳಿಗೆ ಗೆಂಡೆತಿಮ್ಮನೇ ಅಪರಾಧಿಯಾಗಿ ಕಾಣುತ್ತಾನೆ. ದೊಡ್ಡವರಿಂದ ಮೊದಲುಗೊಂಡು ಹೆಂಗಸರು ಸಣ್ಣ ಮಕ್ಕಳು, ಯುವಕ ಯುವತಿಯರಿಗೆಲ್ಲರಿಗೂ ಬೇಕಾಗಿದ್ದ ಗೆಂಡೆತಿಮ್ಮ ಅದೇ ಊರಿನಲ್ಲಿ ಈಗ ಮನೆಹಾಳನಾಗಿ, ದೇಸ ಕೆಡಿಸಿ ಬಂದ ಬಡ್ಡೀಮಗನಾಗಿ ಕಂಡುಬರುವುದು ನೋವಿನ ಸಂಗತಿಯಾಗಿದೆ. ಇವನು ತಂದುಕೊಟ್ಟ ವಸ್ತುಗಳು ಅಪ್ಪ-ಮಕ್ಕಳ ನಡುವೆ ಜಗಳ ಹುಟ್ಟು ಹಾಕಿವೆ. ಅಣ್ಣ-ತಮ್ಮಂದಿರ ನಡುವೆ ಮನಸ್ತಾಪ ತಂದಿವೆ. ಅತ್ತೆ ಸೊಸೆಯರು ಕಾದಾಟಕ್ಕಿಳಿದಿದ್ದಾರೆ. ಸಾಲುಂಡಿಯ ಹುಡುಗರಂತೂ ತಮ್ಮ ಹೆಂಡತಿಯರು ಬಳಸುವ ಷೋಕಿ ವಸ್ತುಗಳಿಂದ ಪ್ರೇರಿತರಾಗಿ ಹಿರಿಯರನ್ನು ಲೆಕ್ಕಿಸದೆ ನಾಗರೀಕ ಬದುಕಿನ ಸೆಳೆತಕ್ಕೆ ಒಳಗಾಗಿದ್ದಾರೆ.

ಈ ಸಲುವಾಗಿ ಚಾವಡಿಯಲ್ಲಿ ನಡೆಯುತ್ತಿರುವ ಪಂಚಾಯ್ತಿಯಲ್ಲಿ ಕುಂಟದ್ಯಾವೇಗೌಡ "ನಾಕು ಜನ ಮಾನಮರ್ರ್ಯಾದಿಗೆ ಬದುಕವ್ರೆಲ್ಲ, ವಸಿ ಕೇಳಿ, ಈ ದೇಸ ಕೆಡ್ಸಿ ಬಂದಿರೊ ಸೂಳೆಮಗ ಕುಂತವ್ನೆ ನೋಡಿ..... ಮಳ್ಳಿ ಕುಂತಂಗೆ....ಇವ್ನು ನಾವ್ಯಾರು ಇಲ್ದ ವೊತ್ನಲ್ಲಿ ಅರೀದ ಯೆಣ್ಮಕ್ಕಳಿಗೆ ಪ್ಯಾಟೆಯವ್ರು ಆಕ್ತಾರೆ ನೋಡಿ ಅಂತ ಮನೆ ಹಾಳ್ಮಾಡೊ ಸಾಮಾನ್ನೆಲ್ಲ ತಂದ್ಕೊಟ್ಟವ್ನೆ. ಅದೆಷ್ಟು ದಿನಸಿ ಕದ್ದು ಸುರಿಸ್ಕಂಡು ವೋಗವ್ನೊ.... ಇವ್ನು ತಂದ್ಕೊಟ್ಟ ಅನಿಷ್ಟದ ಸಾಮಾನಿಂದ್ಲೆ ದಿನಾ ನಮ್ಮನೇಲಿ ಅತ್ತಿದ ಜಗಳ ಅರಿದಂಗಾಗದೆ....ಕಡೀಕೆ ನನ್ಮಗ ಪಾಲು ಕೊಡು ಅಂತ ಅನ್ನಮಟ್ಟಕ್ಕೆ ಬಂದು ಕುಂತವ್ನೆ....ಇಂಗೆ ಮನೆ ಹಾಳ್ಮಾಡೊ ಕೆಲ್ಸ ಮಾಡವ್ನಲ್ಲ ಈ ಜಾತ್ಗೆಟ್ಟ ಬಡ್ಡೀಮಗ....ಇವ್ನಿಂದ ನಾವು ಬದುಕಬೇಕೊ ಬ್ಯಾಡ್ವೊ..... ನೀವೆ ಹೇಳಿ"[೧೨] ಎಂದು ತನ್ನ ಆತಂಕವನ್ನು ತೋಡಿಕೊಳ್ಳುತ್ತಾನೆ. ತನ್ನ ವ್ಯಾಪಾರದ ಕಾರಣದಿಂದಾಗಿ ಇಷ್ಟೆಲ್ಲ ರಾದ್ಧಾಂತಗಳಾಗುತ್ತವೆ ಎಂದು ಕನಸು ಮನಸ್ಸಿನಲ್ಲೂ ಗೆಂಡೆತಿಮ್ಮ ಯೋಚಿಸಿರಲಿಲ್ಲ. ಇನ್ನು ಪೇಟೆಯ ವಸ್ತುಗಳು ಹೇಗೆ ಅಪರಿಚಿತವಾಗಿದ್ದವು ಎಂಬುದನ್ನು ಇಲ್ಲಿ ಕಾಣಬಹುದು. ಮೋಟಮ್ಮನೆಂಬ ಮುದುಕಿ ತನ್ನ ಮಕ್ಕಳು ತಂತಮ್ಮ ಹೆಂಡತಿಯರ ಈ ಮೋಜಿನಿಂದ ಅವರ ತಾಳಕ್ಕೆ ಕುಣಿಯುತ್ತ, ತನ್ನನ್ನ ದಿಕ್ಕಿಲ್ಲದ ಪರದೇಸಿಯನ್ನಾಗಿ ಮಾಡಿ ಜಗಲಿಯ ಮೇಲೆ ನೆರಕೆ ಕಟ್ಟಿಕೊಂಡು ಬಾಳಬೇಕಾಗಿ ಬಂದ ತನ್ನ ಸ್ಥಿತಿಯನ್ನು ಕುರಿತು ಒಪ್ಪಿಸುತ್ತಾಳೆ. ಈ ವಿಷಯ ಕೇಳಿ ಗೆಂಡೆತಿಮ್ಮನಿಗೂ ಕರುಳು ಚುರುಕ್ ಎನ್ನುತ್ತದೆ. ಈ ಹಳ್ಳಿಗೆ ತಾನು ನಾಗರೀಕ ಬದುಕಿನ ಬೀಜಗಳನ್ನು ಹುಟ್ಟುಹಾಕಿದೆ ಎಂದು ಗೆಂಡೆತಿಮ್ಮನು ಸಂತೋಷದಿಂದ ಇರುವಾಗಲೆ ಈ ದುರಂತ ಒದಗಿಬಂದಿರುವುದನ್ನು ಕಾಣುತ್ತೇವೆ.

ಕಾದಂಬರಿಯು ಗೆಂಡೆತಿಮ್ಮ ಮತ್ತು ಮರಂಕಿಯರ ಬದುಕಿನ ಸುತ್ತಮುತ್ತ ಹರಡಿಕೊಂಡಿದ್ದರೂ, ಸಾಲುಂಡಿ ಹಾಗೂ ಗೌಪ್ಪಳ್ಳಿಗಳ ಜನರ ಬದುಕು, ಆಚಾರ-ವಿಚಾರಗಳು, ನಂಬಿಕೆಗಳು, ಹಬ್ಬ-ಹರಿದಿನಗಳು ಮುಂತಾದ ವಿವರಗಳೆಲ್ಲ ಈ ಕೃತಿಯಲ್ಲಿ ದಟ್ಟವಾಗಿಯೇ ದಾಖಲಾಗಿವೆ. ಗೆಂಡೆತಿಮ್ಮನ ಗೂಡೆಯು ಅವರ

ಪಾಲಿಗೆ ವರವೇ ಆಗಿರುತ್ತದೆ. ಬೀಡಿ, ಬೆಂಕಿಪೊಟ್ಟಣ, ಕಡ್ಡಿಹುಡಿ, ಎಲೆ-ಅಡಿಕೆ, ನೀಲಗಿರಿ ಎಣ್ಣೆ, ಉಪ್ಪು, ಬೆಲ್ಲ, ಸೀಮೆಎಣ್ಣೆ ಕುಪ್ಪಿ, ಕಸ್ತೂರಿ ಮಾತ್ರೆ ಮುಂತಾದವುಗಳನ್ನು ತಂದುಕೊಟ್ಟು ಇದಕ್ಕೆ ಪ್ರತಿಯಾಗಿ ರಾಗಿ, ಜೋಳ, ಹುರುಳಿಕಾಳು ಪಡೆಯುತ್ತಿರುವುದು ಗ್ರಾಮೀಣ ಸಮಾಜದಲ್ಲಿದ್ದ ಜೀವನ ವಿಧಾನವನ್ನು ಪರಿಚಯಿಸುತ್ತದೆ. ಯಾವುದೊ ಹಬ್ಬಕ್ಕೆ ಬಂದಿದ್ದ ಮರಂಕಿಯನ್ನು ನೋಡಿದ ಬೇದಿಯಮ್ಮ 'ಈ ಹೆಣ್ಣೆ ನಮ್ಮೈದಂಗೆ ಪಸಂದಾಗದೆ' ಎಂದು ಸೊಸೆಯನ್ನಾಗಿ ಆಯ್ಕೆ ಮಾಡಲು ಹಾತೊರೆಯುತ್ತಾಳೆ, ಗೆಂಡೆತಿಮ್ಮನ ಮದುವೆಯಲ್ಲಿ ನಡೆಯುವ ಆಚಾರ-ವಿಚಾರಗಳೆಲ್ಲವನ್ನು ಲೇಖಕರು ಸೂಕ್ಷ್ಮವಾಗಿ ಗ್ರಹಿಸಿದ್ದಾರೆ. ಪರಿವಾರದ ನಾಯಕರ ಆಚರಣೆಗೆ ಸಹಜವಾಗಿ ತಲೆಗೆ ಕೆಂಪು ಚೌಕ, ಪೇಟ ಕಟ್ಟಿಕೊಳ್ಳುವುದು, ಬೀಗರನ್ನು ಜರಿಯುವುದು, ಬೀಗರುಗಳು ಒಬ್ಬರಿಗೊಬ್ಬರು ನೀರು ಉಗ್ಗಾಡುವುದು, ಒಬ್ಬರಿಗೊಬ್ಬರು ಸುಣ್ಣ ಬಳಿಯುವುದು, ಗೆಂಡೆತಿಮ್ಮ ಅಳಿಮಯ್ಯ ತನಕ್ಕೆ ಹೋಗಿದ್ದಾಗ ಅವನ ನಾದಿನಿಯರು ರಾಗಿಯ ಮೇಲೆ ಮಂದಲಿಗೆ ಹಾಕಿ ಜಾರುವಂತೆ ಮಾಡುವುದು, ವೀಳ್ಯೆದೆಲೆ ಎಂದು ಉಗಿನಿ ಎಲೆ ಕೊಡುವುದು, ಮುಂತಾದ ತುಂಬು ಸಾಂಸ್ಕೃತಿಕ ಪರಿಸರದ ಅವಿಭಾಜ್ಯ ಅಂಗಗಳೇ ಆಗಿರುವ ಹಾಸ್ಯದ ವಿಚಾರಗಳನ್ನು ಸೊಗಸಾಗಿ ಚಿತ್ರಿಸಿದ್ದಾರೆ.

ಸಾಲುಂಡಿಯ ಕರುಬಗೇರಿಯ ಕಾಡನ ಮೇಲೆ ಬರುತ್ತಿದ್ದ ಶನಿದೇವರ ಸನ್ನಿಧಿಯಲ್ಲಿ ಊರಿನ ಎಲ್ಲ ತಪ್ಪುನೆಪ್ಪುಗಳು, ಅಷ್ಟೇಕೆ ಸ್ವಯಂ ಪಂಚಾಯ್ತಿಯಲ್ಲೂ ತೀರ್ಮಾನವಾಗದ ಜಗಳಗಳು ಬಗೆಹರಿಯುತ್ತಿದ್ದುದು, ಹಾಗೆಯೇ ಈ ದೇವರ ಬಗ್ಗೆ ಜನರು ಇಟ್ಟುಕೊಂಡಿದ್ದ ಭಯ, ಭಕ್ತಿ, ಪೂಜೆ, ಪುನಸ್ಕಾರ ಮುಂತಾದವುಗಳೆಲ್ಲ ಸಹಜವಾಗಿ ದಾಖಲಾಗಿವೆ. ಗೌವ್ವಳ್ಳಿಯ ಪ್ರಸಿದ್ಧವಾದ ಜನಪದ ಕಲೆಯಾದ ಕೋಲಾಟವನ್ನು ಹಬ್ಬ ಹರಿದಿನಗಳಲ್ಲಿ ಆಡುವುದನ್ನು ಲೇಖಕರು ಸಾಂದರ್ಭಿಕವಾಗಿ ಸಹಜವಾಗಿ ಚಿತ್ರಿಸುತ್ತಾರೆ. ರತ್ನಮ್ಮಳ ಮದುವೆಯಲ್ಲಿ ಗಂಡಿನ ಕಡೆಯುವರನ್ನು ಸ್ವಾಗತಿಸಿದ್ದನ್ನು "ಇಳಿ ಹೊತ್ತಿಗೆ ಸರಿಯಾಗಿ ಗಂಡಿನ ಕಡೆಯುವರ ಸಾಲು ಗಾಡಿಗಳನ್ನು ಗೌವ್ವಳ್ಳಿಗೆ ವಿಶಿಷ್ಟವಾಗಿದ್ದ ಕೊಂಬು, ಕಹಳೆ, ತಮ್ಮಟೆ, ತಾರಸಿ, ದಿಮ್ಮಿ, ಕೊಣಮಿಣೆ ಇತ್ಯಾದಿ ಕಿವಿ ಕಿವುಡಾಗಿಸುವಂತಹ ವಾದ್ಯಗಳು ಸಂಭ್ರಮದಿಂದ ಸ್ವಾಗತಿಸಿದವು" ಹೀಗೆ ಹಲವಾರು ರೀತಿಯ ಸಾಮಾಜಿಕ ಹಾಗೂ ಸಾಂಸ್ಕೃತಿಕ ವಿಚಾರಗಳು ಕಾದಂಬರಿಯಲ್ಲಿ ಚಿತ್ರಿತವಾಗಿವೆ.

ಹೀಗೆ ಗೆಂಡೆತಿಮ್ಮನ ಕಥೆಯನ್ನು ಹೇಳುತ್ತಲೇ ಲೇಖಕರು ಭಾರತದ ಹಲವಾರು ಊರುಗಳ ಸುಡು ವಾಸ್ತವದ ಚಿತ್ರಣಗಳನ್ನು ನಮ್ಮ ಮನೋಲೋಕದ ಮುಂದೆ ತೆರೆದಿಟ್ಟಿದ್ದಾರೆ.

'ಭುಜಂಗಯ್ಯನ ದಶಾವತಾರಗಳು' ಕಾದಂಬರಿಯಲ್ಲಿ ಪರಿವರ್ತನೆ, ಬೆಳವಣಿಗೆ, ನಾಗರೀಕತೆಯ ಶೋಧನೆ-ಮುಂತಾದವುಗಳ ತುಡಿತವಿದ್ದು ಪ್ರಗತಿಪರ ಬದುಕಿನ ಕಡೆ ಹೊರಳುವ ವ್ಯಕ್ತಿಯೊಬ್ಬನ ಆಶಯವಿದೆ. ಹಾಗಾಗಿ ಅನಿವಾರ್ಯವಾಗಿ ಜಾತಿ, ಮತ, ಧರ್ಮಗಳ ಕಟ್ಟನ್ನು ಮೀರಿ ಮಾನವೀಯವಾಗಿ ಬದುಕಲೆತ್ನಿಸುವ ಧೋರಣೆಯಿದೆ. ಜಾತೀಯತೆ, ಅಸಮಾನತೆ, ಸಣ್ಣತನ, ಶೋಷಣೆ, ಊಳಿಗಮಾನ್ಯ ಮನೋಭಾವ-

ಮುಂತಾದವುಗಳು ತುಂಬಿತುಳುಕುತ್ತಿರುವ ಗ್ರಾಮೀಣ ಬದುಕನ್ನು ಇವರು ಕಟ್ಟಿಕೊಡುವ ಸಂದರ್ಭದಲ್ಲಿ ಬದಲಾವಣೆಯನ್ನು ಬಯಸಿದಾಗ ಸಹಜವಾಗಿಯೇ ವಿಘಟನೆಗಳು ಪ್ರಾರಂಭವಾಗುತ್ತವೆ ಎಂಬುದನ್ನು ಲೇಖಕರು ಓದುಗರಿಗೆ ಮನಗಾಣಿಸಿದ್ದಾರೆ. ಪ್ರತಿಷ್ಟಿತ ವ್ಯಕ್ತಿಗಳು ತಮ್ಮ ಬೇರುಗಳು ಸಡಿಲವಾಗುವುದರಿಂದ ಹೌಹಾರಿ ಅವುಗಳನ್ನು ಉಳಿಸಿಕೊಳ್ಳಲು ಹೆಣಗುವ ವಿವರಗಳು ಕಾದಂಬರಿಯಲ್ಲಿ ಬರುತ್ತವೆ.

ಭುಜಂಗಯ್ಯ ಎಂಬ ಸಾಮಾನ್ಯ ರೈತನೊಬ್ಬನು ಬದುಕನ್ನು ಉತ್ತಮವಾಗಿ ಬದುಕಬೇಕೆಂದು ಬಯಸುತ್ತಾನೆ. ಅನಿಶ್ಚಿತ ಮಳೆಯ ಕಾರಣದಿಂದ 'ಆರಕ್ಕೇರದ ಮೂರಕ್ಕಿಳಿಯದ' ಇಂತಹ ಬದುಕನ್ನು ದಾಟಬೇಕೆಂದು ಮನಸ್ಸು ಮಾಡುತ್ತಾನೆ. ವ್ಯವಸಾಯದ ಜೊತೆಗೆ ಇನ್ನೇನನ್ನಾದರು ಮಾಡಬೇಕೆಂಬ ಹಂಬಲ ಇವನಿಗೆ ಮೂಡುತ್ತದೆ. ಇದಕ್ಕೇ ಇವನು ಬದುಕುತ್ತಿರುವ ನೆಲದ ಸ್ಥಿತಿಗತಿಗಳು, ಅನಿವಾರ್ಯತೆಗಳು ಹೋಟೆಲು ಇಡಲು ಪ್ರೇರೇಪಿಸುತ್ತವೆ. ಆದರೆ ಅದು ಅಷ್ಟು ಸುಲಭವಾಗುವುದಿಲ್ಲ. ಹೆಂಡತಿ, ಅವ್ವ ಮತ್ತು ಮಾವ ಮುಂತಾದ ಹತ್ತಿರದವರೆಲ್ಲ ಜಾತಿಗೆಡುತ್ತೇವೆ ಎಂಬ ಭಯದಿಂದ ಈ ನಿಲುವನ್ನು ವಿರೋಧಿಸಿದರೆ, ವೀರಶೈವ ಸಮಾಜ ಕೂಡ ಇದನ್ನು ಒಪ್ಪುವುದಿಲ್ಲ. ವಾಸ್ತವವಾಗಿ ಭುಜಂಗಯ್ಯ ಕ್ರಾಂತಿಕಾರಿಯೂ ಅಲ್ಲ. ಜಡ್ಡುಗಟ್ಟಿದ ಸಂಪ್ರದಾಯಕ್ಕೆ ಅಂಟಿಕೊಳ್ಳುವವನೂ ಅಲ್ಲ. ಬದುಕು ಬಂದ ಹಾಗೆ ವಾಸ್ತವದ ನೆಲೆಗಟ್ಟಿನಲ್ಲಿ ಅದನ್ನು ಸ್ವೀಕರಿಸುತ್ತಾನೆ. ಹೀಗಾಗಿ ಈತನು ತನ್ನ ಪ್ರವೃತ್ತಿ ಮತ್ತು ಸಾಹಸಗಳಿಂದ ಮಾದಳ್ಳಿ ಮತ್ತು ಸುತ್ತಮುತ್ತಲಿನ ಊರಿಗೆಲ್ಲ ವಿಶಿಷ್ಟವಾಗಿಯೇ ಉಳಿಯುತ್ತಾನೆ.

ಆಲನಹಳ್ಳಿಯವರು ಈ ಕಾದಂಬರಿಯಲ್ಲಿ ಬರುವ ಹೋಟೆಲಿನಂತಹ ಹೊಸ ಉದ್ದಿಮೆಯನ್ನು ಕುರಿತ ಸಹಜವಾದ ವಿವರಗಳನ್ನೇ ನೀಡಿದ್ದಾರೆ. ಈ ನೆಲದಲ್ಲಿ ಅದರ ಅನಿವಾರ್ಯತೆಯನ್ನು ಸಹಜವಾಗಿ ಗುರುತಿಸಿದ್ದಾರೆ. ಮಾದಳ್ಳಿಯಲ್ಲಿ ಈ ಸಲ ಎರಡು ಬಾರಿ ಪರ ಮಾಡಿದರೂ ಮಳೆ ಬಂದಿಲ್ಲ. ಉತ್ತ ಹೊಲವನ್ನೇ ಉತ್ತು, ಉತ್ತು, ಜನ ಬೇಸತ್ತಿದ್ದಾರೆ. ಭುಜಂಗಯ್ಯ ಏನಾದರೂ ಮಾಡಬೇಕೆಂದುಕೊಂಡರೂ ಅದು ತಲೆಗೆ ಹೊಳೆಯದೇ ಇದ್ದಾಗ ರಣ ರಣ ಬಿಸಿಲಿನಲ್ಲಿ ಬಸ್ಸಿಗೆ ಹೋಗುವ ಪ್ರಯಾಣಿಕನೊಬ್ಬ 'ನೋಡ್ರಪ್ಪ ಇಲ್ಲೆಲ್ಲಾದ್ರೂ ಕುಡಿಯಾಕಿಷ್ಟು ನೀರು ಸಿಕ್ಕದಾ?' ಎಂದು ಪ್ರಶ್ನಿಸಿ ತಾವೇ ತೆಪ್ಪಗಾದರು. ಮತ್ತೊಬ್ಬ ಇಲ್ಲಿ ಹೋಟೆಲ್ ಇಡುವುದರ ಬಗೆಗಿನ ಅನಿವಾರ್ಯತೆಯನ್ನು ಹೇಳಿ, ಹೋಟೆಲಿನಂತಹ ಉದ್ದಿಮೆಯಿಂದ ಹೇಗೆ ಮುಂದುವರೆಯಬಹುದು ಎಂಬುದರ ಬಗೆಗೆ ಹೇಳುತ್ತಾನೆ. ಈ ಮಾತುಗಳನ್ನು ಕೇಳಿದ ಭುಜಂಗಯ್ಯನ ಕಿವಿಗಳು ಚುರುಕಾದವು. ಭುಜಂಗಯ್ಯನಿಗೂ ಹೋಟೆಲಿಟ್ಟರೆ ಸಮಾಜದ ದೃಷ್ಟಿಯಿಂದ ಜಾತಿಗೆಡಬಹುದೆಂಬ ಅಳುಕಿದೆಯಾದರೂ ಕೋಡಂಗಿ ಅಜ್ಜಪ್ಪ ಲಿಂಗಾಯ್ತನಾದರೂ ಹೆಂಡ ಕಟ್ಟುವ ಬಾಬತ್ತಿನಿಂದ ಮುಂದುವರಿದಿದ್ದು ಇವನಿಗೆ ಧೈರ್ಯ ತುಂಬುತ್ತದೆ. ಇಲ್ಲಿ ಸಾಂಪ್ರದಾಯಿಕ ಬಣ ನಂಬಿಕೆಗಳು ಮತ್ತು ಹುಸಿಯಾದ ದೊಡ್ಡಸ್ತಿಕೆಗಳು ಪ್ರಗತಿಯ ಮಾರ್ಗದಲ್ಲಿ ಹೇಗೆ ತಡೆಯೊಡ್ಡುತ್ತವೆ ಎಂಬುದನ್ನು ನಿರೂಪಿಸಿದ್ದಾರೆ. ಆದರೆ ಈ ಯೋಜನೆಯನ್ನು ತನ್ನ ಆಪ್ತರ ಮುಂದಿಟ್ಟಾಗ ಎಲ್ಲರೂ ವಿರೋಧಿಸುತ್ತಾರೆ. ಆತನ ಮಾವ ಹೋಟೇಲಿಡುವುದು ದೊಡ್ಡ ಅಪರಾಧವೆಂದು ಭಾವಿಸುತ್ತಾನೆ.

ಉತ್ತಮವಾಗಿ ಬದುಕಬೇಕಾದರೆ ಹೋಟೆಲು ಇಟ್ಟರೆ ತಪ್ಪೇನಿಲ್ಲ ಎಂದು ನಿರ್ಧರಿದ ಭುಜಂಗಯ್ಯ. ಹಾಗಾಗಿ ಮಾದಳ್ಳಿಯಲ್ಲಿ "ಶ್ರೀ ಕೆಂಡಗಣ್ಣೇಶ್ವರ ಪ್ರಸನ್ನ" ಎಂದು ತನ್ನ ಮನೆದೇವರ ಹೆಸರಿನಲ್ಲಿ ಹೋಟೆಲು ಪ್ರಾರಂಭಮಾಡುತ್ತಾನೆ.

ಭುಜಂಗಯ್ಯ ಹೋಟೆಲಿಟ್ಟ ಕೆಲವೇ ದಿನಗಳಲ್ಲಿ ಮೊದಮೊದಲು ಅಂಜಾಡುತ್ತಿದ್ದವರು ಈಗ ನೇರವಾಗಿ ಬಂದು, ಹೋಟೆಲಿನ ತಿಂಡಿ, ಕಾಫಿಗಳಿಗೆ ಮಾರುಹೋಗಿ ಜಾತಿಯ ಕಟ್ಟುಗಳನ್ನು ಕಳಚಿಕೊಳ್ಳುತ್ತಾರೆ. ಕೆಲವೇ ದಿನಗಳಲ್ಲಿ ಈ ಉದ್ಯಮದಿಂದ ಸಾಕಷ್ಟು ಹಣಗಳಿಸುತ್ತಾನೆ. ಈ ಕಾದಂಬರಿಯಲ್ಲೂ ಶಿವಾಚಾರದವರಾಗಿ ಎಂಜಲು ತೊಳೆಯಬಾರದೆಂಬ ಅಳುಕು ಇದ್ದರೂ ಉತ್ತಮವಾಗಿ ಬದುಕಬೇಕಾದರೆ ಜಾತಿಯ ಕಟ್ಟುಕಟ್ಟಳೆಗಳನ್ನು ಮೀರುವುದು ಅನಿವಾರ್ಯವೆಂಬ ಧ್ವನಿ ಇದೆ. ಮುಂದೆ ಹೋಟೆಲಿಟ್ಟ ಭುಜಂಗಯ್ಯ ಬದಲಾವಣೆಯಾಗಿ ಊರಿನಲ್ಲಿ ಅವನು ಪ್ರಮುಖ ವ್ಯಕ್ತಿಯಾದುದ್ದನ್ನು ಲೇಖಕರು ವಿವರಿಸಿದ್ದಾರೆ. ಈಗ ಪ್ರತಿಯೊಂದಕ್ಕೂ ಭುಜಂಗಯ್ಯನ ಮಾತಿಲ್ಲದೆ ಏನೂ ನಡೆಯುವುದಿಲ್ಲ. 'ಭುಜಂಗಯ್ಯ ಭುಜಂಗಪ್ಪ'ನಾಗುತ್ತಾನೆ.

ಭುಜಂಗಯ್ಯ ಉತ್ತಮ ಬದುಕಿಗಾಗಿ ತನ್ನೆಲ್ಲ ಮಿತಿಗಳ ಸಮೇತ ಬದಲಾವಣೆಯನ್ನು ಬಯಸುವಂತಹವನೇ ಆಗಿದ್ದಾನೆ. ದೇವನೂರ ಮಠದ ಮಹಾಸ್ವಾಮಿಗಳನ್ನು ಮಾದಳ್ಳಿಯಂತಹ ಕುಗ್ರಾಮಕ್ಕೆ ಕರೆಸಿ 'ಪವಿತ್ರ' ಮಾಡಿಸುತ್ತಾನೆ. ಅದು ಅಲ್ಲಿಯ ಜನರ ಭಾವನೆಯೂ ಆಗಿದೆ. ಆದ್ದರಿಂದಲೇ ಸ್ವಾಮಿಗಳು ಬಂದು ಹೋಗಿ ಒಂದು ವಾರವಾದರೂ ಅವರ ನಡೆನುಡಿ, ನೋಟ, ನಿಲುವು, ಅವರ ಸಂಯಮದ ಘನತೆ, ಗಾಂಭೀರ್ಯ, ಇವುಗಳೆಲ್ಲ ಇಡೀ ಊರಿನ ಜನತೆಯ ಮೇಲೆ ಪ್ರಭಾವ ಬೀರುತ್ತವೆ. ಇದಕ್ಕೆಲ್ಲ ಕಾರಣನಾದ ಭುಜಂಗಯ್ಯನ ಮೇಲೆ ಊರಿನವರಿಗೆಲ್ಲ ಅಭಿಮಾನ ಇನ್ನೂ ಹೆಚ್ಚುತ್ತದೆ. ಭುಜಂಗಯ್ಯನು ದೊಡ್ಡ ಮಠದ ಸ್ವಾಮೀಜಿಯ ಸಖ್ಯವನ್ನು ಬೆಳೆಸುವುದರ ಜೊತೆಗೆ, ಸಾಮಾನ್ಯರೊಡನೆಯೂ ಪ್ರೀತಿಯಿಂದ ಬೆರೆಯುವ ಸದ್ಗುಣದಿಂದಾಗಿ ಬಳೆಶೆಟ್ಟರು, ತಂಬೂರಿ ಅಯ್ನೋರು ಮುಂತಾದ ಹೊರಗಿನವರು ಸಹ ಈತನಿಗೆ ಆತ್ಮೀಯರೇ ಆಗುತ್ತಾರೆ. ಬಳೆಶೆಟ್ಟರ ಮಗಳು ಸುಶೀಲಳನ್ನು ನೋಡಿ ವಿಚಲಿತನಾಗಿದ್ದ ಭುಜಂಗಯ್ಯನು ಜಾತಿ, ವಯಸ್ಸು, ಅಂತಸ್ತು ಹುಸಿ ಪ್ರತಿಷ್ಠೆಗಳೆಲ್ಲವನ್ನು ಮೀರಿ ತಾನಾಗಿಯೇ ಒಲಿದುಬಂದ, ತಬ್ಬಲಿಯಾದ ಸುಶೀಲಳನ್ನು ಮದುವೆಯಾಗುತ್ತಾನೆ.

ಅಂತರಜಾತಿಯ ವಿವಾಹದಿಂದ ಹಳ್ಳಿಗಾಡಿನಲ್ಲಿ ಉಂಟಾಗುವ ಪರಿಣಾಮಗಳನ್ನೆಲ್ಲ ಸಹಜವಾಗಿ ಕಾದಂಬರಿಯಲ್ಲಿ ನಿರೂಪಿಸಿದ್ದಾರೆ. ಊರಿನಲ್ಲಿ ಭುಜಂಗಯ್ಯನ ಏಳಿಗೆಯನ್ನು ಸಹಿಸದಿದ್ದ ಎಲ್ಲರಿಗೂ ಒಂದು ರೀತಿಯ ಕೆಟ್ಟ ಸಂತೋಷವಾಗುತ್ತದೆ. ಸುಶೀಲಳ ಚಿಕ್ಕವ್ವನಿಗೆ ಹಾಲು ಕುಡಿದಷ್ಟೆ ಖುಷಿಯಾಗಿ ಅದು 'ದದ್ದಾದ ಮಡ್ಕೆ' ಎಂದು ಶಪಿಸುತ್ತಾಳೆ. ಪಂಚಾಯ್ತಿ ಸೇರಿಸಿ ಆಕೆಯನ್ನು ಬಿಟ್ಟುಬಿಡುವಂತೆ ಹಿರಿಯರಲ್ಲರೂ ಹೇಳುತ್ತಾರೆ. ಆದರೆ, ಭುಜಂಗಯ್ಯ ಒಪ್ಪುವುದಿಲ್ಲ. ರುದ್ರಪ್ಪ ಭುಜಂಗಯ್ಯನ ಕಪಾಲಕ್ಕೆ ಬಾರಿಸುತ್ತಾನೆ. ಆಗ ಭುಜಂಗಯ್ಯ ಇಲ್ಲಿನ ವಿಷಯವನ್ನು ಪೊಲೀಸರಿಗೆ ತಿಳಿಸುತ್ತಾನೆ. ಊರಿಗೆ ಪೊಲೀಸ್‌ರ ಆಗಮನವಾಗುತ್ತದೆ.

ಗ್ರಾಮೀಣ ಪ್ರದೇಶದಲ್ಲಿ ಪೊಲೀಸರ ಆಗಮನವಾಗುತ್ತಿದ್ದಂತೆ ಎದರಿದ ಊರಿನ ಜನ ಹಾಗೂ ರುದ್ರಪ್ಪ ರಾಜಿ ಮಾಡಿಕೊಳ್ಳುತ್ತೇನೆಂದು ಮುಂದಾಗುವ ವಿವರಗಳು ಸಹಜವಾಗಿ ಬಂದಿದೆ. ವಾಸ್ತವವಾಗಿ ಜಡ್ಡುಗಟ್ಟಿದ ಈ ಜಾತಿ ವ್ಯವಸ್ಥೆಯ ನಡುವೆ ಸಾರ್ವಜನಿಕ ಸ್ಥಳಗಳು, ವಾಹನಗಳು ಹೋಟೆಲ್ ಗಳು-ಮುಂತಾದವುಗಳೆಲ್ಲ ಈ ಪದ್ಧತಿಯನ್ನು ಸಡಿಲಗೊಳಿಸಲು ನೆರವಾಗುತ್ತವೆ. ಭುಜಂಗಯ್ಯನ ಹೋಟೆಲ್‌ನಲ್ಲಿ ಹರಿಜನರನ್ನು ಒಳಕ್ಕೆ ಸೇರಿಸುವುದಿಲ್ಲ. ಅವರಿಗೆ ಬೇರೆಯಾದ ಜೋಪಡಿ ಮಾಡಿಸುವುದರ ಜೊತೆಗೆ ಹರಿಜನರಲ್ಲೂ ಎಡಗೈ ಮತ್ತು ಬಲಗೈನವರೆಂದು ಭೇದವಿರುವುದರಿಂದ ಬೇರೆ ಬೇರೆ ಲೋಟಗಳನ್ನೇ ಇಡಿಸಿದ್ದಾನೆ. ಆದರೆ ಕ್ಯಾತನಹಳ್ಳಿಗೆ ಹೊಸದಾಗಿ ಬಂದಿರುವ ಶುಭ್ರವಾದ ಬಿಳಿ ಬಟ್ಟೆಯನ್ನು ಧರಿಸಿ ಸ್ವಚ್ಛವಾಗಿ ಹೋಟೆಲಿಗೆ ಬರುವ ಮೇಷ್ಟ್ರನ್ನು ಹರಿಜನರೆಂದು ಗುರುತಿಸಲು ಸಾಧ್ಯವಾಗುವುದಿಲ್ಲ. ಇಂತಹ ಚಿತ್ರಣಗಳಿಂದ ಹೋಟೆಲ್, ಸ್ಕೂಲುಗಳು ಮತ್ತು ವಿದ್ಯೆಯು, ಸಾಂಪ್ರದಾಯಕ ಹಿಡಿತಗಳನ್ನು ಅಲುಗಾಡಿಸಲು ಸಾಧ್ಯವೆಂದು ತಿಳಿಯುಬಹುದು. ಹರಿಜನ ಮೇಷ್ಟ್ರು ಹೊಟೆಲಿನಲ್ಲಿ ಕಾಫಿ ಕುಡಿದಿದ್ದನ್ನು ಭುಜಂಗಯ್ಯನ ಏಳಿಗೆಯನ್ನು ಸಹಿಸಲಾರದ ಕೆಲವರು ಇದನ್ನೇ ನೆಪವಾಗಿಟ್ಟುಕೊಂಡು ಇಲ್ಲದ ಕುತಂತ್ರವನ್ನು ಮಾಡಿ ಹೋಟೆಲ್ ಅನ್ನು ಭಸ್ಮಮಾಡಿದ್ದು ದುರಂತವೆನಿಸುತ್ತದೆ.

ಲೇಖಕರು ಭುಜಂಗಯ್ಯನ ವ್ಯಕ್ತಿತ್ವದ ಸುತ್ತಮುತ್ತಲ ಬದುಕನ್ನು ಚಿತ್ರಿಸುತ್ತ ಒಳ್ಳೆ ವಿವರಗಳನ್ನು ಪರಿಚಯಿಸುತ್ತಾರೆ. ಮಾದಳ್ಳಿ ಮಳೆಯಿಲ್ಲದೆ ಬರಗಾಲ ಬಂದು ತತ್ತರಿಸುವಾಗ, ಭುಜಂಗಯ್ಯನ ಪಾತ್ರವೇನು ಎಂಬುದನ್ನು ವಿವರಿಸುತ್ತಾರೆ. ಈ ಸಲವು ಭುಜಂಗಯ್ಯನ ನೇತೃತ್ವದಲ್ಲಿ 'ಪರ ನಡೆಯುತ್ತಿದೆಯಾದರೂ ಮಳೆ ಬರದೆ ಸುಮಾರು ಒಕ್ಕಲುಗಳು ಮಲೆನಾಡಿನ ತೋಟದ ಕಡೆ ಕೆಲಸಕ್ಕೆ ಹೋಗುತ್ತವೆ. ಸರ್ಕಾರದವರು ಕೈಗೊಳ್ಳುವ ಕಾರ್ಯಕ್ರಮವನ್ನು ತಿಳಿದು, ಕಂಟ್ರಾಟುದಾರನಾಗಿದ್ದ ನರಸಿಂಹಯ್ಯನ ಜೊತೆಯಲ್ಲಿ ಮೇಸ್ತ್ರಿಯಾಗಿ ಕೆಲಸ ಮಾಡುವ ಮೂಲಕ ಊರಿನ ಬಡಜನರು ಉಸಿರಾಡುವಂತೆ ಮಾಡುವುದು ಅವನ ವ್ಯಕ್ತಿತ್ವದ ಒಂದು ಮುಖವಾಗಿದೆ. ಮಾದಳ್ಳಿಗೆ 'ಕಾಲರಾ' ಬಂದಾಗ ಇಡೀ ಉರೇ ಸಾವಿನ ಭಯದಿಂದ ನಡುಗುತ್ತದೆ. ಭುಜಂಗಯ್ಯ, ಸುಶೀಲೆಯೊಂದಿಗೆ ಯಡಿಯೂರಿಗೆ ಹೋಗಿ ಬರುವಾಗ ರಾಜನಿಂದ 'ಕಾಲರಾ'ದ ವಿಷಯ ತಿಳಿದು ಅವನ ಸಲಹೆಯ ಮೇರೆಗೆ ಇಂಜಕ್ಷನ್ ಹಾಕಿಸಿಕೊಂಡೇ ಊರಿಗೆ ಮರಳುತ್ತಾರೆ. ಇಲ್ಲಿ ಭುಜಂಗಯ್ಯನೇ ರಾಜನನ್ನು ಮೈಸೂರಿಗೆ ಓದಲು ಸೇರಿಸಿದ್ದವನು. ಈಗ ರಾಜನ ಸಲಹೆಯು ಅತ್ಯುಪಯುಕ್ತ ಎನಿಸುತ್ತದೆ. ಇಲ್ಲಿ ಲೇಖಕರು ಗ್ರಾಮೀಣ ಪ್ರದೇಶದಿಂದ ಬಂದು ವಿದ್ಯೆಯನ್ನು ಪಡೆದ ರಾಜ ಮುಂದೆ ಮಾದಳ್ಳಿಯ ಚೇತನವಾಗುವ ಆಶಯವನ್ನು ಈ ಪಾತ್ರದ ಮೂಲಕ ಧ್ವನಿಸುತ್ತಾರೆ.

ಉತ್ತಮವಾದ ಬದುಕಿಗೆ ಸದಾ ತುಡಿಯುವ ಮನೋಧರ್ಮದವನಾದ ಭುಜಂಗಯ್ಯ ತನ್ನ ಜಮೀನಿಗೆ ಪಂಪ್‌ಸೆಟ್ ಬಾವಿ ತೋಡಿಸುತ್ತಾನೆ. ಭುಜಂಗಯ್ಯ ಏನು ಮಾಡಿದರೂ ಇಡೀ ಸುತ್ತಮುತ್ತಲಿನ ಹಳ್ಳಿಗೇ ಹೊಸದಾಗಿರುತ್ತದೆ. ಬಾವಿಯಿಂದ ನೀರು ತೆಗೆಯಲು ಕೋಟೆಯಿಂದ ಡೀಸಲ್ ಮಿಷನ್ ತಂದು ನೀರೆತ್ತುವಾಗ ಅದರ ಶಬ್ಧ ಹಾಗೂ ಡೈನೋಮೊ ಸಿಡಿಸಿ ಬಂಡೆ ತೆಗೆದದ್ದು ಇಡೀ ಸುತ್ತಮುತ್ತಲಿನ

ಹಳ್ಳಿಗಳಿಗೂ ಗೊತ್ತಾಗಿ ಭುಜಂಗಯ್ಯನು ಹೋಟೆಲಿಟ್ಟಾಗ, ದೊರೆತ ಪ್ರಚಾರಕ್ಕಿಂತ ಹೆಚ್ಚಿನ ಪ್ರಚಾರ ಇದಕ್ಕೆ ಸಿಗುತ್ತದೆ. ಇಲ್ಲಿ ಗ್ರಾಮೀಣ ಮುಗ್ಧ ಜನರು ಹೊಸದನ್ನು ಕಂಡಾಗ ಹೇಗೆ ಪ್ರತಿಕ್ರಿಯಿಸುತ್ತಾರೆ ಎಂಬ ವಿವರಗಳನ್ನು ಲೇಖಕರು ಸೂಕ್ಷ್ಮವಾಗಿ ಗ್ರಹಿಸಿದ್ದಾರೆ. ಭುಜಂಗಯ್ಯ ತೋಟ ಮಾಡಿದ ಮೇಲೆ ಮಾದಳ್ಳಿಯ ಬೆಂಗಾಡು ಭೂಮಿಗೆ ಈ ಬಗೆಯ ಕೆಲಸ ಇದೇ ಮೊದಲನೆಯದಾಗಿತ್ತು. ಮಳೆ ಬಿದ್ದರೆ ಉಂಟು, ಇಲ್ಲದಿದ್ದರೆ ಇಲ್ಲ ಅನ್ನುವಂತಿದ್ದ ಹೊಲವನ್ನು ಗದ್ದೆಮಾಡುವುದನ್ನು ನೋಡಿ ಊರಿನ ಜನಕ್ಕೆ ಪವಾಡ ಎನಿಸುತ್ತದೆ. ಭುಜಂಗಯ್ಯನ ಈ ಪ್ರಭಾವದಿಂದ ಸುತ್ತಮುತ್ತಲಿನ ಊರುಗಳಲ್ಲೆಲ್ಲ ಬಾವಿ ತೆಗೆಸುತ್ತಾರೆ. ಹೊಸ ಮನೆಯನ್ನು ಕಟ್ಟಿಸಿದಾಗ ಸುಶೀಲಳ ಅಪೇಕ್ಷೆಯಂತೆ ಶೌಚಾಲಯವನ್ನು ಕಟ್ಟಿಸುತ್ತಾನೆ. ಇದು ಇಡೀ ಊರಿಗೆ ಪ್ರಚಾರವಾಗಿ ಊರಿನವರಿಗೆ ವಿಚಿತ್ರವೆನಿಸುತ್ತದೆ. ಜನಕ್ಕೆ ಇದು ತಮಾಷೆಯಾಗಿಯೂ ಕಂಡುಬರುತ್ತದೆ. ಲೇಖಕರು ನಾಗರೀಕತೆಯ ತುಣುಕುಗಳು ಕ್ರಮೇಣವಾಗಿ ಗ್ರಾಮೀಣ ಬದುಕಿಗೆ ಪ್ರವೇಶಿಸುವ ರೀತಿಯನ್ನು ಸಹಜವಾಗಿ ಚಿತ್ರಿಸಿದ್ದಾರೆ. ಊರಿನ ಕೆಲವರ ದೃಷ್ಟಿಯಿಂದ ಭುಜಂಗಯ್ಯ ಇಟ್ಟುಕೊಂಡವಳಾಗಿಯೇ ಸುಶೀಲ ಕಂಡುಬಂದರೂ ಕೊನೆಗೆ 'ಊರೇ ಸೈ ಅನ್ನುವಂತೆ' ಗಂಡನೊಡನೆ ಹೊಂದಿಕೊಂಡು ಹೋಗುವ ಸುಸಂಸ್ಕೃತ ಮಹಿಳೆಯಾಗಿ ಚಿತ್ರಿತವಾಗಿದ್ದಾಳೆ. ಭುಜಂಗಯ್ಯ ಊರಿನಲ್ಲಿ ಯಾರಿಗಾದರೂ ಹಾವು ಕಚ್ಚಿದರೆ ಅವರಲ್ಲಿದ್ದ ವಿಷವನ್ನು ಹೀರಿ ಹೊರತೆಗೆದು ಔಷಧಿಯನ್ನು ಕೊಟ್ಟು ಬದುಕಿಸುತ್ತಿರುತ್ತಾನೆ. ಗ್ರಾಮೀಣ ಭಾಗಗಳಲ್ಲಿ ಈ ರೀತಿಯ ಮನೆ ಮದ್ದನ್ನು (ನಾಟಿ ಔಷಧಿ) ಹಲವಾರು ಖಾಯಿಲೆಗಳಿಗೆ ಕೊಡುವುದನ್ನು ಇಂದಿಗೂ ಕಾಣಬಹುದು.

ಗ್ರಾಮೀಣ ಭಾಷೆಯನ್ನು ಬಳಸಿರುವುದು ಮಹತ್ವದ ಅಂಶವಾಗಿದೆ. "ಎಲ್ಲಾನು ಕಂಡಿರವ್ರೆ ಯೇಳಿದ್ದು, ಆ ನನ್ನ ಸವತಿ ಸಿಕ್ಲಿ ನಡುಬೀದೀಲಿ ಅವಳ್ಗೆ ಎಕ್ಕಡದ ಪೂಜೆ ಮಾಡ್ದಿದ್ರೆ ನಾನು ನಮ್ಮಪ್ಪಂಗೆ ಹುಟ್ಟಿದ ಮಗಳೇ ಅಲ್ಲ"[೧೩] ಪಾರ್ವತಿ ತನ್ನ ಸ್ವಭಾವಕ್ಕೆ ತಕ್ಕಂತೆ ಜಕ್ಕಳ್ಳಿಯ ಭಾಷೆಯಲ್ಲಿ ಮಾತಾಡುವುದು ಸಹಜವಾಗಿ ಬಂದಿದೆ. "ಲೋ ಮಾದೇವ ಬಾಲ್ರಾ...... ನೋಡ್ಲಾ ನೀನೇ ವಸಿ ನೊಗ ಬಿಚ್ಚಿ ಯತ್ತ ಕೊಟ್ಗೇಗೆ ಕಟ್ಟಾಕಿ ನವ್ಮೊಳ್ಗೆ ಯೇಳು ಇನ್ನೇನು ಈಗ ಬಂದ್ಬುಟ್ಟೆ"[೧೪] ಇಲ್ಲಿ ನವ್ಮೊಳ್ಗೆ ಎನ್ನುವ ಮಾತು ಹೆಂಡತಿಯರಿಗೆ ಗಂಡಂದಿರು ಹೇಳುವ ರೀತಿಯನ್ನು ಸಹಜವಾಗಿ ತಂದಿದ್ದಾರೆ. ವಯಸ್ಸಾದ ಹೆಂಗಸರನ್ನು ಕಿರಿಯರು 'ಅತ್ತಮ್ಮ' ಎಂದು ಮಾದಳ್ಳಿಯಲ್ಲಿ ಕರೆಯುತ್ತಿದ್ದರು. ಈ ಪರಿಪಾಠಕ್ಕೆ ಅನುಗುಣವಾಗಿ ಸುಖದುಃಖವನ್ನೆಲ್ಲ ಮಾತಾಡಿದ ಮೇಲೆ ಪಾರ್ವತಿ ತಾನು ಬಂದ ಕಾರಣವನ್ನು ತಿಳಿಸಿದಾಗ ಕಾಳವ್ವ ತಕ್ಷಣ ಆಳೊಬ್ಬನನ್ನು ಕೂಗಿ ಕರೆದು ಸೊಪ್ಪನ್ನು ಮುರಿದು ತರಲು ಹೇಳಿದಳು. "ಬಸರೆಂಗ್ಸು ಏನಾರೆ ಬಾವಣ್ಕೆ ಆದ್ರೆ ನಾಚ್ಕೋಬ್ಯಾಡ. ಯಾರತ್ರಾದ್ರು ಹೇಳಿ ಕಳ್ಸು ಸಾಕು"[೧೫] ಎಂದ ಕಾಳವ್ವ ಪಾರ್ವತಿಯನ್ನು ತುಂಬ ವಾತ್ಸಲ್ಯದಿಂದ ಆದರಿಸಿ ಕಳಿಸಿದಳು. ಇಲ್ಲಿ ಜಾತಿಯ ಭೇದವಿಲ್ಲದೆ ಗ್ರಾಮೀಣ ಸಮಾಜದಲ್ಲಿ ಹೀಗೆ ಕಿರಿಯರು ಅತ್ತಮ್ಮ ಎಂದು ಕರೆಯುವ ರೀತಿಯನ್ನು ಲೇಖಕರು ಸಹಜವಾಗಿ ತಂದಿದ್ದಾರೆ. ಬಸಿರೆಂಗ್ಸು

ಬಾವಣ್ಕೆ, ಮುಂತಾದ ಗ್ರಾಮ್ಯ ಪದಗಳನ್ನು ಪಾತ್ರಗಳ ಮನೋಧರ್ಮಕ್ಕೆ ತಕ್ಕಂತೆ ಸೆರೆ ಹಿಡಿದಿರುವುದು ವಿಶೇಷ ಎನಿಸುತ್ತದೆ.

ಆಲನಹಳ್ಳಿಯವರ ಈ ಮೂರು ಕಾದಂಬರಿಗಳಲ್ಲಿ ಹಲವಾರು ವಿಶಿಷ್ಟ ಅಂಶಗಳನ್ನು ಕಾಣುತ್ತೇವೆ. ಇವರ ಕಾದಂಬರಿಗಳ ಲೋಕವು ಗ್ರಾಮೀಣ ಬದುಕೇ ಆಗಿದೆ. ಮೈಸೂರು ಮತ್ತು ಹೆಗ್ಗಡದೇವನಕೋಟೆಯ ಸುತ್ತಮುತ್ತಲಿನ ಬದುಕಿನ ವಿವರಗಳನ್ನು ಇವು ಜೀವಂತವಾಗಿ ಕಟ್ಟಿಕೊಡುತ್ತವೆ. ಇವರ ಕಾದಂಬರಿಗಳಲ್ಲಿ ಪ್ರಾದೇಶಿಕವಾದ ಸೊಗಡು ಇರುವುದು ವಿಶೇಷವೆನಿಸುತ್ತದೆ. ಈ ಮೂರು ಕಾದಂಬರಿಗಲಲ್ಲಿ ದಲಿತರು, ಜೀತಗಾರರಾಗಿಯೋ, ಕುಳವಾಡಿಗಳಾಗಿಯೋ, ಪ್ರತ್ಯಕ್ಷವಾಗುತ್ತಾರೆ. ಒಟ್ಟಾರೆ ಮೇಲು ಜಾತಿಯವರ ಮನೆಯನ್ನೇ ಅವಲಂಬಿಸಿ ಜೀವಿಸುವಂತಹ ವಿವರಗಳು ಸಮಾನವಾಗಿ ಕಂಡುಬರುತ್ತವೆ.

## ಅಡಿ ಟಿಪ್ಪಣಿಗಳು

೧. ಸಮಕ್ಷಮ: ಯು.ಆರ್. ಅನಂತಮೂರ್ತಿ ; ಪು. ೧೫೫; ೧೯೮೦

೨. ಆಲನಹಳ್ಳಿ ಸಣ್ಣಕಥೆಗಳು: ಶ್ರೀಕೃಷ್ಣ ಆಲನಹಳ್ಳಿ; ಪು. ೯೪; ೧೯೮೬

೩. ಅದೇ: ಪು.೯೫

೪. ಶ್ರೀಕೃಷ್ಣ ಆಲನಹಳ್ಳಿಯವರ ಸಾಹಿತ್ಯ: ಎಂ.ಎಸ್. ಶೇಖರ್; ಪು. ೧೧೭; ೨೦೦೨

೫. ಕಾಡು : ಶ್ರೀಕೃಷ್ಣ ಆಲನಹಳ್ಳಿ; ಪು. ೨೨; ೧೯೮೮

೬. ದುಡಿಯುವವರ ದನಿ ಮತ್ತು ಇತರ ಲೇಖನಗಳು: ಎಸ್. ವೆಂಕಡರಾವ್; ಪು. ೪೭; ೧೯೮೩

೭. ಅರ್ಥಲೋಕ: ಜಿ.ಎಸ್. ಅಮೂರ; ಪು. ೩೬; ೧೯೮೮

೮. ಪರಸಂಗದ ಗೆಂಡೆತಿಮ್ಮ: ಶ್ರೀಕೃಷ್ಣ ಆಲನಹಳ್ಳಿ; ಪು. ಗೆಂಡೆತಿಮ್ಮನನ್ನು ಕುರಿತು ಎಂಬ ಆರಂಭದ ಪುಟದಿಂದ; ೧೯೭೪

೯. ಅದೇ: ಪು. ೩೧

೧೦. ಅದೇ: ಪು. ೫೩

೧೧. ಅದೇ: ಪು. ೧೧೩

೧೨. ಅದೇ: ಪು. ೧೫೪

೧೩. ಭುಜಂಗಯ್ಯನ ದಶಾವತಾರಗಳು: ಶ್ರೀಕೃಷ್ಣ ಆಲನಹಳ್ಳಿ; ಪು. ೨೧೬; ೧೯೮೩

೧೪. ಅದೇ: ಪು. ೧೧-೧೨

೧೫. ಅದೇ: ಪು. ೫೪

ಆಲನಹಳ್ಳಿಯವರ ಕಥೆ ಕಾದಂಬರಿಗಳಲ್ಲಿ ನಾಯಕ–ನಾಯಕಿಯರು ತಮ್ಮ ಉಳಿವಿಗಾಗಿ ಬದುಕನ್ನು ಕಟ್ಟಿಕೊಳ್ಳುವ ನಿಟ್ಟಿನಲ್ಲಿ ಸಮಾಜದೊಂದಿಗೆ, ಪರಿಸರದೊಂದಿಗೆ, ವ್ಯವಸ್ಥೆಯೊಂದಿಗೆ, ಮನುಷ್ಯರೊಂದಿಗೆ ಹಲವಾರು ರೀತಿಯ ಸಂಘರ್ಷಗಳನ್ನು ನಡೆಸುತ್ತಾರೆ. ತಮ್ಮ ವ್ಯವಸ್ಥೆಯಲ್ಲಿರುವ ಜಾತೀಯತೆ, ಅಸಮಾನತೆ, ಶೋಷಣೆಗಳನ್ನು ಅಳಿಸಲು ಬದುಕಿನೊಡನೆ ಹೋರಾಟ ಮಾಡುತ್ತಾರೆ. ಇವರ ಇತರ ಸಾಹಿತ್ಯ ಪ್ರಕಾರಗಳಲ್ಲಿ ಗುರುತಿಸಬಹುದಾದ ತಣ್ಣನೆಯ ವಿಷಾದದ ಎಳೆಯುನ್ನು ಬಹುಪಾಲು ಕಥೆಗಳಲ್ಲೂ ಕಾಣಬಹುದಾದ ನೋವಿನ ಚಿತ್ರಣವಿದ್ದರೆ, ಇನ್ನು ಕೆಲವು ಕಥೆಗಳಲ್ಲಿ ಪರಸ್ಪರ ಪ್ರೀತಿಸಿ, ಪ್ರೇಮಿಸಿ, ಒಟ್ಟಿಗೆ ಬದುಕಲಾರದೆ

ಜೀವನವಿಡೀ ಕೊರಗುವ ಸ್ಥಿತಿಯನ್ನು ಕಾಣುತ್ತೇವೆ. ಆಲನಹಳ್ಳಿಯವರ ಒಟ್ಟು ಕಥೆಗಳಲ್ಲಿ ಬದುಕಿನ ಬಗ್ಗೆ ಮಾನವೀಯ ಸಂಬಂಧಗಳ ಸಂಕೀರ್ಣತೆಯ ಬಗ್ಗೆ ಅತ್ಯಂತ ನಿರ್ಲಿಪ್ತವಾಗಿ ಚಿತ್ರಿಸುವ ಮತ್ತು ಗಾಢವಾದ ಅನುಭವ ವಲಯವನ್ನು ಪರಿಚಯಿಸುವ ಕೆಲವು ಶ್ರೇಷ್ಠ ಕಥೆಗಳು ಇವೆ.

ಈ ಎಲ್ಲ ಕಥೆಗಳಲ್ಲಿ ಬರುವ ಕಥಾನಾಯಕರು ತಮ್ಮ ಬದುಕನ್ನು ವಿವಿಧ ದಿಕ್ಕಿನಲ್ಲಿ ರೂಪಿಸಿಕೊಳ್ಳಲೆತ್ನಿಸುತ್ತ, ವೈಚಾರಿಕ ದೃಷ್ಟಿಯಿಂದ ಬದುಕಲು ಹವಣಿಸುತ್ತಾರೆ. ಹೊಸ ಬದುಕಿನ ಬಗೆಗಿನ ತುಡಿತ ಮತ್ತು ತನ್ನ ಕರುಳ ಬಳ್ಳಿಗಳ ಸಂಬಂಧ ಇವೆರಡರ ನಡುವೆ ಸಂಘರ್ಷವೇರ್ಪಡುತ್ತದೆ. ಇವುಗಳ ನಡುವಣ ಸಂಘರ್ಷಗಳಿಗೆ ಆಲನಹಳ್ಳಿಯವರು ಕಲೆಯ ರೂಪವನ್ನು ಕೊಡಲು ಪ್ರಯತ್ನಿಸಿದ್ದಾರೆ. ಈ ಪ್ರಯತ್ನದಲ್ಲಿ ಸೋಲು ಗೆಲುವುಗಳು ಸಹಜವಾಗಿ ಕಂಡುಬಂದಿವೆ. ಇವುಗಳನ್ನು ಎದುರಿಸಲಾರದೆ ಬಿಕ್ಕಟ್ಟಿಗೆ ಸಿಕ್ಕಿಕೊಂಡು, ನರಳುವ ನವ್ಯದ ದುರ್ಬಲ ಕಥಾನಾಯಕರು ಸಹ ಇಲ್ಲಿ ಹಲವಾರು ಕಥೆಗಳಲ್ಲಿ ಕಂಡುಬರುತ್ತಾರೆ.

'ತಪ್ತ' ಕಥೆಯಲ್ಲಿ ಹಳತು ಮತ್ತು ಹೊಸತರ ನಡುವಿನ ಸಂಘರ್ಷವನ್ನು ಚಿತ್ರಿಸುವ ಪ್ರಯತ್ನವಿದ್ದು, ಇಲ್ಲಿ ಪರಕೀಯ ಪ್ರಜ್ಞೆಯನ್ನು ವಸ್ತುವಾಗಿ ಬಳಸಿಕೊಳ್ಳಲಾಗಿದೆ. ಈ ಕಥೆಯ ನಾಯಕನು ಪ್ರಭಾ ಎಂಬ ಹುಡುಗಿಯನ್ನು ಪ್ರೀತಿಸಿ, ಮದುವೆಯಾಗುವುದಾಗಿ ಮಾತು ಕೊಟ್ಟಿದ್ದಾನೆ. ಆದರೆ ಊರಿನಲ್ಲಿ ಅಕ್ಕನ ಮಗಳನ್ನು ಮದುವೆಯಾಗಬೇಕೆಂದು ಅವ್ವ ಹಠ ಹಿಡಿದಿರುತ್ತಾಳೆ. ಗೌರಿ, ಪ್ರಭಾ ಇವರುಗಳಲ್ಲಿ ಕಥಾನಾಯಕ ಪ್ರಭಾಳೇ ಆಪ್ತಳೆಂದು ಹೇಳಿಕೊಂಡರೂ ಅವನ ನಿಜವಾದ ಸಂಬಂಧಗಳ ಬೇರು ಹಳ್ಳಿಯಲ್ಲೇ ಇವೆ. ಅವುಗಳನ್ನು ಕಡಿದುಕೊಳ್ಳಲಾರ. ಆದರೆ ಪ್ರಭಾಳನ್ನು ಬಿಡಲಾರ. ಎರಡು ಕಡೆ ಸಿಕ್ಕಿ ನರಳುತ್ತಾನೆ. ಏನೆ ಆದರೂ ಪ್ರಭಾಳನ್ನು ಬಿಟ್ಟು ಗೌರಿಯನ್ನು ಮದುವೆಯಾಗಲಾರೆ ಎಂದು ಮನಸ್ಸಿನಲ್ಲಿ

ಚಡಪಡಿಸಿದರು ಹಾಗೆ ಮಾಡಿದರೆ ಅವ್ವ ಸಾಯುತ್ತಾಳೆ. ಗೌರಿ ಅನಾಥೆಯಾಗುತ್ತಾಳೆ. ಮನೆ ದಿಕ್ಕಾಪಾಲಾಗುತ್ತದೆ ಎಂದೆಲ್ಲಾ ಆಲೋಚಿಸುತ್ತಾನೆ. ಗೌರಿಯನ್ನು ಕಡೆಗಣಿಸಲಾರದ ಸ್ಥಿತಿಗೆ ಬರುತ್ತಾನೆ. ಊರಿಗೆ ಬಂದಾಗ ಅವನ ನೈತಿಕ ಶಕ್ತಿ ಕುಂದುತ್ತದೆ. ಪ್ರಭಾಳ ಸೆಳೆತದಷ್ಟೇ ಹಾಸಿಗೆ ಹಿಡಿದು ಮಲಗಿರುವ ಹೆತ್ತ ಕರುಳು ಕೂಡ, ಕುದಿಯುತ್ತಿರುವ ಎದೆಗೆ ಮತ್ತೆ ಬೆಂಕಿಯಿಡುತ್ತದೆ. ದೇವರ ಅಸ್ತಿತ್ವವನ್ನೇ ಅಂದಶ್ರದ್ಧೆಯೆಂದು ಗೆಳೆಯರಿಗೆಲ್ಲ ಕೊರೆದಿದ್ದವನು ಅದೇ ನಾಲಿಗೆಯಿಂದ 'ದೇವರೇ ಕಾಪಾಡು' ಎಂದುಕೊಳ್ಳುತ್ತಾನೆ. ಹೀಗೆ ನೋವು, ನಿರಾಶೆ, ಗೊಂದಲ, ಸಂಕೀರ್ಣತೆಯ ಎಲ್ಲ ಚಿತ್ರಣಗಳಿಂದ ಲೇಖಕರು ಕತೆಯಲ್ಲಿ ನಮಗಿರುವ ಅಂತಹ ಪ್ರಜ್ಞೆಯ ಅರಿವನ್ನು ಹಿಗ್ಗಿಸುತ್ತಾರೆ. ಇಲ್ಲಿ ಸಂಪೂರ್ಣವಾಗಿ ವೈಚಾರಿಕನೂ ಅಲ್ಲದ ಅಥವಾ ಕರುಳಬಳ್ಳಿಯ ಸಂಬಂಧವನ್ನು ಕಳಚಿಕೊಳ್ಳಲು ಸಾಧ್ಯವಿಲ್ಲದ ಅಸಹಾಯಕನಾಗಿ ನರಳುವಂತೆ ಚಿತ್ರಿಸಿರುವ ಈ ಬರಹ ನವ್ಯ ಲೇಖಕರ ರೀತಿಯದೆ ಆಗಿದೆ.

'ತೊರೆ' ಕಥೆಯು ಸ್ವಲ್ಪಮಟ್ಟಿಗೆ ಭಿನ್ನವಾಗಿದೆ. ಹಿರಿಯರ ಅರ್ಥವಿಲ್ಲದ ಪ್ರತಿಷ್ಠೆ, ಅಂತಸ್ತು, ಐಶ್ವರ್ಯ, ದ್ವೇಷ, ಅಸೂಯೆಗಳ ಪರಿಣಾಮವಾಗಿ ಲಕ್ಷ್ಮಿ ಮತ್ತು ಪ್ರಭುವಿನ ಸಂಬಂಧ ಕಡಿದುಬಿದ್ದು ಜೀವನವಿಡೀ ಪರಿಸಪಿಸುವ ವಿಷಾದವಿದೆ. ಲಕ್ಷ್ಮಿಯು ಹಿರಿಯರ ಅಪೇಕ್ಷೆಯಂತೆ ಶಕ್ತನಲ್ಲದವನನ್ನು ಕಟ್ಟಿಕೊಂಡು ಕೊನೆಗೂ ವಿಧವೆಯಾಗಿ, ತನ್ನ ಯೌವ್ವನದ ಬದುಕನ್ನೇ ಮುರುಟಿಕೊಂಡು ಹಿಂಸೆ ಹಾಗೂ ಕ್ರೂರ ಯಾತನೆಯನ್ನು ಅನುಭವಿಸುತ್ತಾಳೆ. ಪ್ರಭು ಕೂಡ ಅಣ್ಣನ ಅರ್ಥವಿಲ್ಲದ ಪ್ರತಿಷ್ಠೆ ಹಾಗೂ ಆಜ್ಞೆಯಂತೆ, ತನಗಿಷ್ಟವಿಲ್ಲದಿದ್ದರೂ, ಶ್ರೀಮಂತರ ಮನೆಯವಳಾದ ತಾರಾಳನ್ನು ಮದುವೆಯಾಗಿ ಜೀವನವಿಡೀ ಲಕ್ಷ್ಮಿಗಾಗಿ ಕೊರಗುತ್ತಲೇ ನರಕವನ್ನು ಅನುಭವಿಸುತ್ತಾನೆ. ಕೊನೆಗೆ ಪ್ರೀತಿಸಿದ ಜೀವಗಳೆರಡೂ ಒಂದಾಗುವುದು ಆರೋಗ್ಯಪೂರ್ಣವಾದುದ್ದೆನಿಸುತ್ತದೆ. ಈ ದೃಷ್ಟಿಯಿಂದ ಅನಂತಮೂರ್ತಿಯವರು "ಕಥೆಗಾರ ಹೇಳಿದ್ದಕ್ಕಿಂತಲೂ ಹೆಚ್ಚಿಸುವ ವ್ಯಾಕುಲವನ್ನು ಪ್ರಕಟಿಸುವ ಈ ಕಥೆ ಪಾತ್ರಗಳ ನಿಸ್ಸಹಾಯಕತೆಯನ್ನು ಉದ್ವೇಗ ಇಲ್ಲದಂತೆ ನೈತಿಕ ಪ್ರಜ್ಞೆಯಿದ್ದು ಅದರ ಕಾಠಿಣ್ಯವಿಲ್ಲದಂತೆ ಕಾಣುವ ದೃಷ್ಟಿಯುದ್ದಾಗಿದೆ"[7] ಎಂದು ಗುರುತಿಸಿರುವುದು ಸೂಕ್ತವಾಗಿದೆ. ಇಲ್ಲಿ ನಾಯಕ ಕೂಡ ಸುಡು ವಾಸ್ತವವನ್ನು ಎದುರಿಸಲಾಗದ ನವ್ಯ ಕಥಾನಾಯಕರ ಗುಂಪಿಗೆ ಸೇರುತ್ತಾನೆ.

'ಸಂಬಂಧ' ನಾಯಕ ಶೂದ್ರವರ್ಗಕ್ಕೆ ಸೇರಿದ್ದರೆ, ನಾಯಕಿ ಬ್ರಾಹ್ಮಣ ತರುಣಿ, ನಾಯಕನು ಓದುತ್ತಿರುವಾಗಲೇ ಇವನ ಬಾಲ್ಯದ ಗೆಳತಿ ಮದುವೆಯಾಗಿ ಪಶುವಿನ ರೀತಿಯ

ಗಂಡನ ಎಲ್ಲ ದೌರ್ಜನ್ಯಗಳನ್ನು ತಾಳಿಕೊಳ್ಳುತ್ತ ಬದುಕಿನಲ್ಲಿ ನಗ್ಗಿ ನಲುಗಿ ಹೋಗಿದ್ದಾಳೆ. ಇಲ್ಲಿ ಅಕ್ಷರಜ್ಞಾನದಿಂದ ವಂಚಿತರಾದ ಗ್ರಾಮೀಣ ಮಹಿಳೆಯರು ಅನುಭವಿಸುವ ದುರಂತ ಬದುಕನ್ನು ನೋಡಬಹುದು.

'ಆಗಂತುಕ' ಕಥೆಯು ಸಾವಿನ ಸುತ್ತಮುತ್ತಲಿನ ವಿವರಗಳ ನಡುವೆ ಹರಡಿಕೊಂಡಿದೆ. ಗ್ರಾಮೀಣ ಬದುಕಿನ ವಿವರಗಳು ಒಂದಕ್ಕೊಂದು ಹೊಂದಿಕೊಂಡು ಬೆಳೆಯುತ್ತಾ ಹೋಗುತ್ತದೆ. ದೊಡ್ಡವರ ಲೋಕವು ಕಿಟ್ಟಿಯ ಕುತೂಹಲದ ಕಣ್ಣಿನ ಮೂಲಕ ಕತೆಯಲ್ಲಿ ಬಿಚ್ಚಿಕೊಳ್ಳುತ್ತಾ ಹೋಗುತ್ತದೆ. ಇಲ್ಲಿ ಕಿಟ್ಟಿ ಪ್ರೀತಿಸುವ ಅಜ್ಜಿ, ತಾಯಿಯರು ಪರಸ್ಪರ ಹೊಡೆದಾಡುತ್ತಾರೆ. ತಂದೆ ತಾಯಿಯನ್ನು ಹೊಡೆಯುತ್ತಾನೆ. ತಾಯಿ ದುಗುಡದಲ್ಲಿ ಸಾವಿನ ಬಗ್ಗೆ ಮಾತನಾಡುತ್ತಾಳೆ. ತುಂಬಿದ ಅನುಭವದ ಅಜ್ಜಿ ವಿಷಾದದಿಂದ ಸಾವಿನ ಅನಿವಾರ್ಯತೆಯನ್ನು ಕುರಿತು ಹೇಳುತ್ತಾರೆ. ಪ್ರೇಮ, ರೋಗ, ಯಾತನೆ, ಸಂಘರ್ಷ ಎಲ್ಲವೂ ಈ ಕಥೆಯ ಲೋಕದ ಸಂಕೀರ್ಣ ಅಂಶಗಳು.

'ನೆಲಗುಮ್ಮ' ಕಥೆಯಲ್ಲೂ ನಾಯಕ ಪ್ರಬುದ್ಧನಾದವನು. ಇಲ್ಲೂ ಸಹಾ ಅಕ್ಕನ ಮಗಳನ್ನು ಮದುವೆಯಾಗುವಂತೆ ಹಿರಿಯರ ಒತ್ತಾಯವಿದೆ. ಇದರ ಮಧ್ಯೆ ಸಿಕ್ಕಿದ ನಾಯಕ ಸ್ವಲ್ಪಮಟ್ಟಿಗೆ ತೊಳಲಾಡುತ್ತಾನೆ. ಆದರೂ ಭೂತದಿಂದ ಬಿಡಿಸಿಕೊಳ್ಳುವ ಹೋರಾಟ ಮಾಡುತ್ತಾನೆ. ಹಳೆಯ ಸಂಬಂಧದ ಸೆಳೆತ, ಯೌವ್ವನದ ಉತ್ಕರ್ಷ, ಹೊಸ ವಿಚಾರಗಳ ತುಡಿತ–ಇವುಗಳು ಇವರ ಬಹುಪಾಲು ಕಥೆಗಳಲ್ಲಿ ಬರುತ್ತವೆ. ಬೇರೆ ಜಾತಿಯವಳನ್ನು ಮದುವೆಯಾಗುವ ವಿಷಯ ತಿಳಿದು ಅಜ್ಜಿ ಮೊಮ್ಮಗನನ್ನು ಬೈಯುತ್ತಾಳೆ. ಹೀಗೆ ಹಳತು ಮತ್ತು ಹೊಸತರ ನಡುವೆ ಪ್ರಬುದ್ಧ ವೈಚಾರಿಕತೆಯ ಧ್ವನಿ ವ್ಯಕ್ತವಾಗಿರುವುದನ್ನ ಕಾಣಬಹುದು. ಕಥಾನಾಯಕ ತನ್ನ ಅಜ್ಜಿಯು ಕಾಯಿಲೆ ಬಿದ್ದು ಸಾವನ್ನು ಎದುರು ನೋಡುತ್ತಿರುವ ವಿಷಯ ತಿಳಿದು ವಿಚಲಿತನಾಗುವುದಿಲ್ಲ. ಪ್ರಬುದ್ಧ ವೈಚಾರಿಕನಾದ ಇವನು ಪ್ರತಿಯೊಬ್ಬರಿಗೂ ಸಾವು ಅನಿವಾರ್ಯ ಎಂಬುದನ್ನು ಅರಿತುಕೊಂಡವನಾಗಿದ್ದಾನೆ.

'ಶ್ರಾವಣ' ಕಥೆಯು ಪ್ರೇಮ, ವಿರಹಗಳ ಸಾಫಲ್ಯ ಮತ್ತು ವೈಫಲ್ಯಗಳ ಸುತ್ತಮುತ್ತ ಹರಡಿಕೊಂಡಿದೆ. ದಟ್ಟವಾದ ಜೀವನ ಪ್ರೀತಿಯ ಸೆಳೆತವಿರುವ ಈ ಕಥೆಯಲ್ಲಿ ಬದುಕಿನಲ್ಲಿ ಏನೇ ತೊಡಕು, ಬಿಕ್ಕಟ್ಟು, ವೈಫಲ್ಯಗಳಿದ್ದರೂ ಅವುಗಳೆಲ್ಲವನ್ನೂ ಮೀರಿ ಜೀವನ ಶ್ರೇಷ್ಠವಾದುದು ಎಂಬ ಆಶಯ ಕಥೆಯಲ್ಲಿ ಧ್ವನಿತವಾಗುತ್ತದೆ. ಶಕುಂತಳೆ ಒಬ್ಬನನ್ನು ಪ್ರೀತಿಸಿ ಈಗಾಗಲೇ ಮೋಸಹೋಗಿದ್ದಾಳೆ. ಶಕುಂತಳೆ ತನ್ನ ಜೀವನದಲ್ಲಿ ಏನೇ ಯಾತನೆ,

ನೋವುಗಳನ್ನು ಅನುಭವಿಸಿದರೂ ಹೊಸ ಬದುಕಿನ ಸಾಧ್ಯತೆಯ ಕಡೆಗೆ ಹೊರಳುವುದು ಅರ್ಥಪೂರ್ಣವಾಗಿದೆ. ತನ್ನನ್ನು ಇದೀಗ ಬಯಸುತ್ತಿರುವ ಜನಾರ್ಧನ ಯಾವ ಜಾತಿಯಾದರೇನು? ಅವನಿಗೆ ಪ್ರೀತಿಸುವ ಹೃದಯವಿದೆ. ಅವನು ತನ್ನ ವಿಚಾರವೆಲ್ಲ ತಿಳಿದೂ ತನ್ನನ್ನು ಬಯಸಿದ್ದಾನೆ. ಕಾಗದ ಬರೆದಿದ್ದಾನೆ. ಹೃದಯ ಬಿಚ್ಚಿದ್ದಾನೆ. ತನ್ನ ಒಪ್ಪಿಗೆಗಾಗಿ ಕಾದಿದ್ದಾನೆ. ಹೇಳಿ ಬಿಡಬೇಕು...... ತನಗೊಂದು ಪ್ರೀತಿಸುವ ಹೃದಯವಿದೆ ಎಂದುಕೊಂಡ ಶಕುಂತಲಾ ಪ್ರಣಯ ವೈಫಲ್ಯದಿಂದ ನೊಂದು, ಏಕಾಂಗಿ ಬದುಕಿನ ಕ್ರೂರ ಯಾತನೆಯನ್ನು ಅನುಭವಿಸಲಾರದೆ, ಹೊಸ ಬದುಕಿಗೆ ಹೊರಳುವುದು ಮಹತ್ವವೆನಿಸುತ್ತದೆ. ಜಾತಿ, ಮತ, ವಯಸ್ಸು ಅಂತಸ್ತುಗಳ ಮಡಿವಂತಿಕೆಗಳನ್ನು ದಾಟಿ ಬದುಕು ಇರುವುದನ್ನು ಕಂಡುಕೊಂಡದ್ದು, ಸಾಫಲ್ಯ ಜೀವನಕ್ಕೆ ಹೊರಳಿದ್ದು ಗಮನಾರ್ಹವಾದುದಾಗಿದೆ.

'ಅಂಟಿದ ನಂಟಿನ ಕೊನೆ ಬಲ್ಲವರಾರು?' ಕಥೆಯಲ್ಲಿ ಬ್ರಾಹ್ಮಣ ತರುಣಿ ಶಾಲಿನಿಯು ಬ್ರಾಹ್ಮಣ ವಿರೋಧಿ ಶೂದ್ರ ನಾಯಕನನ್ನು ಪ್ರೀತಿಸುತ್ತಾಳೆ. ಅವನನ್ನು ಮದುವೆಯಾಗಲು ಬಯಸುತ್ತಾಳೆ. ಆದರೆ ನಾಯಕ ಮದುವೆಯಾಗಲು ಒಪ್ಪುವುದಿಲ್ಲ. ಶಾಲಿನಿ ಬೇರೊಬ್ಬರ ಜೊತೆ ಮದುವೆಯಾದರೂ ಯಾವುದಕ್ಕೂ ಹೆದರದೆ, ಯಾವುದೇ ಸಂಘರ್ಷಕ್ಕೆ ಒಳಗಾಗದೇ ನಾಯಕನ ಜೊತೆ ಸುಖಪಡುತ್ತಾಳೆ. ಬದುಕು ಕೊಡಬಹುದಾದದ್ದನ್ನೆಲ್ಲ ಅನಾಮತ್ತು ಸ್ವೀಕರಿಸುತ್ತಾಳೆ. ಅರಗಿಸಿಕೊಳ್ಳುತ್ತಾಳೆ. ಅವಳಿಗೆ ಬದುಕಿನ ಬಗ್ಗೆ ಧನ್ಯತೆ ಇದೆ. ಮೇಲುನೋಟಕ್ಕೆ ಕ್ರಾಂತಿಕಾರಿಯ ಹಾಗೆ ಪೋಸು ಕೊಡುವ ನಾಯಕ ಒಳಗೆ ಅಷ್ಟು ಗಟ್ಟಿಯಾದವನಲ್ಲ ಎನಿಸುತ್ತದೆ. ಎಷ್ಟೇ ಇತಿಮಿತಿಗಳಿದ್ದರೂ ಕಾಮದ ಸುತ್ತಮುತ್ತ ಹೆಣೆದುಕೊಂಡಿರುವ ಈ ಕಥೆ ಪ್ರೀತಿ, ಪ್ರೇಮ ಮುಂತಾದ ಯೌವ್ವನದ ಉತ್ಕರ್ಷತೆಯಿಂದ ಜಾತಿ, ಧರ್ಮ, ಮಡಿವಂತಿಕೆಯನ್ನು ದಾಟಿ ಸಹಜವಾದ ಮಾನವೀಯವಾದ ಸಾರ್ಥಕ ಬದುಕಿನ ಕಡೆ ತುಡಿಯುವ ಯುವ ಜನತೆಯ ಮನಸ್ಸನ್ನು ಅಭಿವ್ಯಕ್ತಿಸುತ್ತದೆ.'ಗೀಜಗನಗೂಡು' ಈ ಕಥೆಯಲ್ಲಿ ಬದುಕನ್ನು ಅದು ಇರುವ ಹಾಗೆ ನೋಡುವ, ಅನುಭವಗಳನ್ನು ಅವು ದಕ್ಕಿದ ಹಾಗೆ ಸ್ವೀಕರಿಸುವ ಜೀವನದ ರೀತಿಯನ್ನು ಕಾಣುತ್ತೇವೆ. ಪ್ರಪಂಚದ ಯಾವುದೇ ಮೂಲೆಯಲ್ಲಿದ್ದರೂ ಮನುಷ್ಯನ ಮೂಲಭೂತ ಪ್ರವೃತ್ತಿಗಳು ಒಂದೇ ಆಗಿರುತ್ತವೆ ಎಂಬುದನ್ನು ಗುರುತಿಸುವುದರ ಜೊತೆಗೆ ಪ್ರೀತಿ, ವಿಶ್ವಾಸ, ಮಾನವೀಯತೆ, ಹೃದಯವಂತಿಕೆಗಳು, ಕಾಲ ದೇಶಗಳನ್ನು ಮೀರಿ ಗಟ್ಟಿಗೊಳ್ಳುತ್ತವೆ ಎಂಬುದನ್ನು ಇಲ್ಲಿ ಬರುವ ಪಾತ್ರಗಳ ಮನೋಧರ್ಮದಿಂದ ಗುರುತಿಸಬಹುದು. ಮದುಮಲೈ ಅರಣ್ಯಕ್ಕೆ ರಷ್ಯನ್ ತರುಣಿ ಬಂದಿರುತ್ತಾಳೆ. ಇದರ ನಾಯಕ

ಬರಹಗಾರ. ಈತನು ಇದೇ ಸ್ಥಳಕ್ಕೆ ಬಂದಿರುತ್ತಾನೆ, ಇವರಿಬ್ಬರು ಪರಿಚಯವಾಗಿ, ಅದು ಸ್ನೇಹಕ್ಕೆ ತಿರುಗಿ, ಸ್ನೇಹ ಪ್ರಣಯವಾಗಿ ಕೊನೆಯುವರೆಗೂ ಜೀವಂತ ಸಂಬಂಧವಾಗಿ ರೂಪುಗೊಳ್ಳುವುದು ಗಮನಾರ್ಹವಾಗಿದೆ. ಈಕೆಯನ್ನು ಹೋಟೆಲ್ ಮಾಲೀಕನಾದ ಪೊವೆಲ್‌ನು ಆಕೆಯ ಗಂಡನೆಂದು ಸುಳ್ಳು ಹೇಳಿ ರಷ್ಯಾದಿಂದ ಕರೆತಂದಿರುತ್ತಾನೆ. ನಾಯಕ 'ಗೀಜಗನ ಹಕ್ಕಿಯ ಗೂಡನ್ನು' ಅವಳಿಗೆ ಕಿತ್ತುಕೊಡುತ್ತಾನೆ. ಬಾಲ್ಯದಲ್ಲಿ ಇದನ್ನೇ ಚಪ್ಪಲಿ ಮಾಡಿಕೊಂಡು ತಿರುಗುತ್ತಿದ್ದುದನ್ನು ಅವಳಿಗೆ ತಿಳಿಸಿದಾಗ ನಕ್ಕು ಸಂತೋಷಪಡುತ್ತಾಳೆ. ಈ ಎಲ್ಲ ಸಂಬಂಧವನ್ನು ತನ್ನ ಗಂಡನಿಗೆ ತಿಳಿಸುತ್ತೇನೆಂದು ಅವಳು ಹೇಳುತ್ತಾಳೆ. ಇಲ್ಲಿ ಲೇಖಕರು ರಷ್ಯನ್ ಜನಾಂಗದಲ್ಲಿ ಬದುಕನ್ನು ಮುಕ್ತವಾಗಿ ಅನುಭವಿಸುವಿಕೆ ಮತ್ತು ಭಾರತೀಯ ಸಮಾಜದಲ್ಲಿ ಕಂಡುಬರುವ ಕಟ್ಟುಕಟ್ಟಳೆಗಳನ್ನು ಕುರಿತು ಚರ್ಚಿಸುತ್ತಾರೆ.

ಮಾನವನು ನಾಗರೀಕತೆಯ ಶೋಧದಲ್ಲಿ ಬಹುದೂರ ಸಾಗಿದ್ದರೂ ಅವನ ಮೂಲ ಪ್ರವೃತ್ತಿಗಳಾದ ಕಾಡುತನ, ದ್ವೇಷ, ಕಾಮುಕತೆ ಮುಂತಾದವುಗಳು ಇನ್ನೂ ಹೇಗೆ ಅದಿಮ ಸ್ಥಿತಿಯಲ್ಲಿಯೇ ಇವೆ ಎಂಬ ವಾಸ್ತವ ಸ್ಥಿತಿಯನ್ನು ಇವರ ಕೃತಿಗಳಲ್ಲಿ ಕಾಣಬಹುದು. ಇನ್ನು ಉಳ್ಳವರ ನಡುವೆಯೇ ಮಣ್ಣು, ಹೆಣ್ಣು ಹಾಗೂ ಅರ್ಥವಿಲ್ಲದ ಪ್ರತಿಷ್ಠೆಗಾಗಿ ಮಾರಾಮಾರಿಯಾಗಿ ಅದು ಹಿಂಸೆಯ ರೂಪವನ್ನು ತಾಳಿ ಕೊನೆಗೆ ಮಾನವೀಯ ಅಂತಃಕರಣವೇ ನಾಶವಾಗುತ್ತದೆ ಎನಿಸಿ, ಬದುಕಿನ ಬಗೆಗೆ ಗಾಢವಾದ ಚಿಂತನೆಗೆ ಹಚ್ಚುವ ಈ ಕೃತಿಗಳು ಆಲನಹಳ್ಳಿಯವರ ಸೃಜನಶೀಲತೆಗೆ ಸಾಕ್ಷಿಯಾಗಿದೆ.

'ಕಾಡು' ಕಾದಂಬರಿಯಲ್ಲಿ ಕೊಪ್ಪಲು ಮತ್ತು ಹೊಸೂರು ಗ್ರಾಮಗಳಲ್ಲಿನ ಜನರ ನಡುವೆ ಸಂಘರ್ಷಗಳು ಒಂದಲ್ಲ ಒಂದು ರೀತಿಯಲ್ಲಿ ಉಲ್ಬಣಿಸುತ್ತಿರುತ್ತವೆ. ಚಂದ್ರೇಗೌಡ ಒಬ್ಬ ಪ್ರತಿಷ್ಠಿತ ವ್ಯಕ್ತಿ. ಈತ ಊರಿನಲ್ಲಿ ಎಲ್ಲಾ ಸಮಸ್ಯೆಗಳಿಗೂ ಪಂಚಾಯ್ತಿಯ ಮೂಲಕ ಪರಿಹಾರ ಮಾಡುತ್ತಿರುತ್ತಾನೆ. ಜೀತದಾಳು ಕೆಂಚ ತನ್ನ ಕೇರಿಯ ದೇವಿಯ ಜೊತೆ ಲೈಂಗಿಕ ಸಂಬಂಧ ಇಟ್ಟುಕೊಂಡಿದ್ದು ಪಂಚಾಯ್ತಿಗೆ ಬರುತ್ತದೆ. ನ್ಯಾಯದಲ್ಲಿ ಚಂದ್ರೇಗೌಡನ ಪ್ರತಿರೂಪದಂತೆಯೇ ಇರುವ ಹೊಸೂರಿನ ಶಿವಗಂಗ ತನ್ನ ಹುಳುಕನ್ನು ಕೆದಕಲು ಯತ್ನಿಸಿದಾಗ ಚಂದ್ರೇಗೌಡನ ಪ್ರತಿಷ್ಠೆಗೆ ಧಕ್ಕೆಯಾಗಿ 'ಅಪರಾಧಿ' ಕೆಂಚನನ್ನು ಸಾಯಬೀಳ ಹೊಡೆಯುತ್ತಾನೆ. ಜೊತೆಗೆ ಶಿವಗಂಗನ ಕುಮ್ಮಕ್ಕು ಇದಕ್ಕೆಲ್ಲ ಕಾರಣ ಎಂದು ಅವನನ್ನು ಹೀನಮಾನ ಬೈಯ್ಯುತ್ತಾನೆ. ಇದರಿಂದ ದೊಡ್ಡ ರಾದ್ಧಾಂತವಾಗಿ ಶಿವಗಂಗನು ಚಂದ್ರೇಗೌಡನ ಮೇಲೆ ದ್ವೇಷ ಕಾರುತ್ತಾ ಚಂದ್ರೇಗೌಡನ ರಾಗಿ ಮೆದೆಗೆ ಬೆಂಕಿ ಹಚ್ಚಿಸುತ್ತಾನೆ. ನಂತರ ಓಕುಳಿಯಂತಹ ಸಾಂಸ್ಕೃತಿಕ

ಹಬ್ಬದಲ್ಲೂ, ಹಳೆಯ ವೈರದಿಂದ, ರಾಕ್ಷಸರಂತೆ ಬಡಿದಾಡುತ್ತಾರೆ. ಉಳ್ಳವರ ಈ ಬಿರುಕಿನಿಂದ, ಅರ್ಥವಿಲ್ಲದ ಪ್ರತಿಷ್ಠೆ ಮತ್ತು ಮಾರಾಮಾರಿತನದಿಂದ ದ್ವೇಷ ಬೆಳೆಯುತ್ತಲೇ ಹೋಗುತ್ತದೆ. ಇವರ ಪಶುತ್ವದಿಂದ ಅಮಾಯಕ ಮುಗ್ಧೆ ಕಮಲಮ್ಮನ ಮೇಲೆ ಅತ್ಯಾಚಾರ ನಡೆಯುತ್ತದೆ. ಕನಸ್ಸು ಮನಸ್ಸಿನಲ್ಲಿಯೂ ಈ ದುರಂತವನ್ನು ಯೋಚಿಸದ ಚಂದ್ರೇಗೌಡ ಅಪಮಾನ, ಹಿಂಸೆ, ರೋಷದಿಂದ ಕುದಿಯುತ್ತಾನೆ. ಕೊನೆಗೆ ಇದರ ಪ್ರತೀಕಾರವಾಗಿ ಶಿವಗಂಗನನ್ನು ಬಲಿ ತೆಗೆದುಕೊಳ್ಳುತ್ತಾನೆ. ಇವೆಲ್ಲವನ್ನು ಕಾದಂಬರಿಕಾರರು ಸ್ಪಷ್ಟವಾಗಿ ಕಟ್ಟಿಕೊಡುತ್ತಲೇ ಅಲ್ಲಿನ ಜನರ ಬದುಕು, ಅವರು ನಂಬಿದ್ದ ಮೌಲ್ಯಗಳು, ಕುರುಡು ನಂಬಿಕೆಗಳು ಹಾಗೂ ಆಚಾರ-ವಿಚಾರಗಳನ್ನು ಪರಿಚಯಿಸುತ್ತಾರೆ. ಕಾದಂಬರಿಯಲ್ಲಿ ನಡೆಯುವುದೆಲ್ಲವೂ ದೊಡ್ಡವರ ಲೋಕದ ಆಗುಹೋಗುಗಳೇ ಆಗಿವೆ. ಆದರೆ ಕಾದಂಬರಿಕಾರರು ಮುಗ್ಧ ಪಾತ್ರಗಳ ಒಳನೋವುಗಳಲ್ಲಿ ಇಲ್ಲಿ ನಡೆಯುವ ಕಿಟ್ಟಿಯ ಕಣ್ಣಿನ ಮೂಲಕ ಅನಾವರಣಗೊಳಿಸುತ್ತಾರೆ. ಇಲ್ಲಿ ಮನುಷ್ಯರಲ್ಲಡಗಿರುವ ರಾಕ್ಷಸ ಪ್ರವೃತ್ತಿ, ಅಜ್ಞಾನ, ಸೊಕ್ಕು, ದ್ವೇಷ, ಅಸೂಯೆ ಎಲ್ಲವುಗಳ ಪರಿಚಯ ನಮಗಾಗುವುದಲ್ಲದೆ, ಇದೆಲ್ಲದರ ಪರಿಣಾಮವಾಗಿ ಬದುಕು ವಿನಾಶದತ್ತ ಸಾಗುತ್ತಿರುವುದನ್ನು ಕಾಣುತ್ತೇವೆ. ಊರಿನ ಪ್ರಧಾನ ವ್ಯಕ್ತಿಯಾದ ಚಂದ್ರೇಗೌಡನ ದೌರ್ಬಲ್ಯದಿಂದ ಇಡೀ ಊರೇ ತತ್ತರಿಸಿ ಹೋಗುತ್ತದೆ. ಇವನು ಕಾಡಿನ ಪ್ರಾಣಿಗಳು ಹೇಗೆ ತಮ್ಮ ಎಲ್ಲೆಯಲ್ಲಿ ಸರ್ವಾಧಿಕಾರತ್ವವನ್ನು ಮೆರೆಯುತ್ತವೆಯೋ ಹಾಗೆ ಮೆರೆದು ಊರ ಅವನತಿಗೆ ಕಾರಣನಾಗುತ್ತಾನೆ. ಊಳಿಗಮಾನ್ಯ ವ್ಯವಸ್ಥೆಯಲ್ಲಿ ಹೆಣ್ಣು, ಭೂಮಿ ಮತ್ತು ಜಾತಿಗಳು ಹೇಗೆ ಪ್ರಮುಖ ಆಧಾರಸ್ತಂಭಗಳಾಗಿರುತ್ತವೆ. ಈ ವ್ಯವಸ್ಥೆಗೆ ಕಿಂಚಿತ್ ಧಕ್ಕೆ ಬಂದರೂ ಅದರ ದುಷ್ಪರಿಣಾಮ ಇಡೀ ಬದುಕನ್ನು ಹೇಗೆ ದುರಂತಕೊಯ್ಯುತ್ತದೆ ಎಂಬುದನ್ನು ಚಿತ್ರಿಸಿದ್ದಾರೆ.

ಉಳ್ಳವರ ನಡುವಿನ ಅರ್ಥವಿಲ್ಲದ ಪ್ರತಿಷ್ಠೆಯ ಘರ್ಷಣೆಯಲ್ಲಿ ದಲಿತ ಕೆಂಚ ಬಲಿಯಾಗುವ ಚಿತ್ರಣ ಹೃದಯ ಕಲಕುವಂತೆ ಮೂಡಿಬಂದಿದೆ. ಕೆಂಚನಿಗೆ ಚಂದ್ರೇಗೌಡ ಪಂಚಾಯ್ತಿಯಲ್ಲಿ ಹೊಡೆದಾಗ ಶಿವಗಂಗ "ಇಂತಹ ನ್ಯಾಯ ಭಾರಿ ನೋಡಿವ್ನಿ ಬುಡಯ್ಯ ನ್ಯಾಯ ಮಾಡುವವರೇ ಮೊದ್ಲು ನ್ಯಾಯವಾಗಿದ್ರೆ ಅಲ್ವ? ಅನ್ನುತ್ತಿದ್ದ ಹಾಗೆ, ಚಂದ್ರೇಗೌಡ ಇನ್ನು ಒಂದು ಹೆಜ್ಜೆ ಮುಂದೆ ಬಂದು ನೀ ಯಾವನ್ಲ ಕೇಳಾಕೆ ಅಂದರು. ಶಿವಗಂಗ ಗತ್ತಿನಿಂದಲೇ ಅವನು ನನ್ನಟ್ಟಿ ಆಳು ಕಣಯ್ಯ, ಅದ್ಕೆ ಅಕ್ಕದೆ ಕಣಯ್ಯ ಕೇಳಾಕೆ ಎಂದ"[3]. ಇಲ್ಲಿ ಇಬ್ಬರೂ ಶೋಷಕರೇ, ಅದು ಬೇರೆ ಬೇರೆ ರೂಪದಲ್ಲಿದೆಯಷ್ಟೆ. ಶಿವಗಂಗ 'ನನ್ನಟ್ಟಿ ಆಳು'

ಅಂದರೆ ಚಂದ್ರೇಗೌಡ 'ನನ್ನೂರ ಆಳು' ಎಂದು ಕೂಗಾಡುತ್ತಾರೆ. ಅವರಿಬ್ಬರ ಅಹಂಕಾರಕ್ಕೆ, ಸ್ವಾರ್ಥಕ್ಕೆ ಕೆಂಚ ಬಲಿಯಾಗುವುದು ದುರಂತ ಎನಿಸುತ್ತದೆ. ನಡೀಲ ಕೆಂಚ ಬೇಕಾದವ್ರ ಕೋಟೆಗೋಗಲಿ ಎಂಬ ಶಿವಗಂಗನ ಮಾತು ಚಂದ್ರೇಗೌಡನ ಅಸ್ತಿತ್ವಕ್ಕೆ ಧಕ್ಕೆ ತಂದಾಗ ಅವನು ರಾಕ್ಷಸನ ಹಾಗೆ ತನ್ನ ಅಜ್ಞಾನದಿಂದ ಶಿವಗಂಗನಿಗೆ ನಾಲ್ಕು ಬಾರಿಸಿಬಿಡುತ್ತಾನೆ. ನಂತರ ಚಂದ್ರೇಗೌಡ ಇದೆಲ್ಲ ನಿನ್ನಿಂದಲ್ಲವೆ ಎಂದು ಮತ್ತೆ ಕೆಂಚನಿಗೆ ಹುಣಸೆ ಸೆಬ್ಬೆಯಿಂದ ತಪ್ಪಾಯ್ತು ಅಂತ ಕಾಲು ಕಟ್ಟಿಕೊಂಡರೂ ಸಾಯಬೀಳುವಂತೆ ತರಿಯುತ್ತಾನೆ. ಇವರಿಬ್ಬರಿಂದಲೂ ಕೆಂಚ ಶೋಷಣೆಗೊಳಗಾಗುತ್ತಾನೆ. ಈ ಘಟನೆಗಳೆಲ್ಲ ಕಿಟ್ಟಿಗೆ ತನ್ನ ಅಜ್ಜಿಯು ಹೇಳುತ್ತಿದ್ದ ರಾಕ್ಷಸರ ಕಥೆಗಳನ್ನು ನೆನಪಿಗೆ ತರುತ್ತವೆ. ಹೊಸೂರು ಮತ್ತು ಕೊಪ್ಪಲಿನಂತಹ ಕುಗ್ರಾಮಗಳಲ್ಲಿ ನಡೆಯುವ ಉಳ್ಳವರ ನಡುವಿನ ನಿಲ್ಲದ ಘರ್ಷಣೆ ಮತ್ತು ಆ ಮೂಲಕ ದಲಿತರ ಶೋಷಣೆ ಇಡೀ ಭಾರತದ ಹಳ್ಳಿಗಳಲ್ಲೆಲ್ಲಾ ನಡೆಯುತ್ತದೆಯೆಂಬುದನ್ನು ಕಾಣಬಹುದು.

ಪಂಚಾಯ್ತಿಯಲ್ಲಿ ಆದ ಜಗಳ, ಅಪಮಾನ, ಹಿಂಸೆ–ಇಡೀ ಕಾದಂಬರಿಗೆ ಪ್ರಮುಖ ತಿರುವನ್ನು ಕೊಡುತ್ತವೆ. ಲೇಖಕರು ಚಂದ್ರೇಗೌಡನಲ್ಲಿರುವ ಅಹಂಕಾರ, ಕ್ರೌರ್ಯ, ದರ್ಪ ಮತ್ತು ಅಜ್ಞಾನವನ್ನು ಒಟ್ಟಾಗಿಯೇ ಚಿತ್ರಿಸಿದ್ದಾರೆ. ಹೊಸೂರ ಕೊಂಡಯ್ಯನ ಜಮೀನನ್ನು ಚಂದ್ರೇಗೌಡನು ಕೊಂಡುಕೊಂಡಾಗ–ಇದಕ್ಕೆ ಪ್ರತಿಯಾಗಿ ಇವನ ಎದುರಾಳಿ ಶಿವಗಂಗ ಕೊಂಡಯ್ಯನನ್ನು ಚಂದ್ರೇಗೌಡನಿಗೆ ಹಣ ವಾಪಸ್ಸು ಕೊಡಲು ಪುಸಲಾಯಿಸುತ್ತಾನೆ. ಆದರೆ ಕೊಂಡಯ್ಯ ಮಾತ್ರ ಇದಾವುದಕ್ಕೂ ಒಪ್ಪದೇ 'ಉಂಡ ಮನೆಗೆ ಎರಡು ಬಗೆಯಬಾರದೆಂಬ' ಭಾವನೆಯಿಂದ ಚಂದ್ರೇಗೌಡನ ಹೆಸರಿಗೆ ನೋಂದಾವಣಿ ಮಾಡಿಸುತ್ತಾನೆ. ಇಲ್ಲಿ ಲೇಖಕರು ಕೊಂಡಯ್ಯನಂತಹ ಕೆಳವರ್ಗದಲ್ಲಿರುವ ಪ್ರಾಮಾಣಿಕರನ್ನು ಕಾದಂಬರಿಯಲ್ಲಿ ಗುರುತಿಸಿರುವುದು ವಿಶೇಷ ಎನಿಸುತ್ತದೆ. ಈ ಬಗೆಯ ಗುಣಗಳನ್ನು ಸಾಮಾನ್ಯವಾಗಿ ಕೆಳವರ್ಗದ ಜನರಲ್ಲಿ ಕಾಣಬಹುದಾಗಿದೆ. ಮನುಷ್ಯನಲ್ಲಡಗಿರುವ ಈ 'ಕಾಡುತನ' ಎಂತಹ ಅತಿರೇಕವನ್ನು ತಲುಪಬಲ್ಲದೆಂಬುದು–ಚಂದ್ರೇಗೌಡನ ಪ್ರತಿರೂಪದಂತಿರುವ ಶಿವಗಂಗ ಚಂದ್ರೇಗೌಡನ ರಾಗಿ ಮೆದೆಗೆ ಬೆಂಕಿಯನ್ನಿಡಿಸುವ ಘಟನೆಯಿಂದ ವ್ಯಕ್ತವಾಗುತ್ತದೆ.

ಉಳ್ಳವರ ನಡುವಣ ಸಂಘರ್ಷದಲ್ಲಿ ಯಾವಾಗಲೂ ಸಾಮಾನ್ಯ ಜನರ ಬದುಕು ನಗ್ಗಿನಲುಗಿಹೋಗುತ್ತದೆ. ಇಲ್ಲಿ ಬರುವ ಬಹುಪಾಲು ದಲಿತರು ಗೌಡರ ಮನೆಯ ಜೀತದಾಳಾಗಿದ್ದಾರೆ. ಗೌಡರ ಮನೆಗಳು ಉದ್ಧಾರವಾದರೆ ತಮ್ಮ ಬದುಕು, ಇಲ್ಲದಿದ್ದರೆ ಇಲ್ಲವೆಂದೇ ಭಾವಿಸಿರುವ ಇವರು ತಮ್ಮ ಧಣಿಗಳನ್ನು ದೇವರೆಂದೇ ಭಾವಿಸುತ್ತಾರೆ.

ಕಿಟ್ಟಿಯನ್ನು ಸಿಳ್ಳ, ಲೊಂಪಿ, ದೇವಿ ಮತ್ತು ವಯಸ್ಸಾದ ಕರಿಯ ಕೂಡ 'ಕಿಟ್ಟಪ್ಪರೇ' ಎಂದೇ ಕರೆಯುತ್ತಾರೆ. ಕಿಟ್ಟಿ ಮಾತ್ರ ಅವರನ್ನೆಲ್ಲ ಏಕವಚನದಲ್ಲೇ ಕರೆಯುತ್ತಾನೆ. ಚಂದ್ರೇಗೌಡನಂತು ದಲಿತರನ್ನು ಮಾತಾಡಿಸುವ ಬಗೆ ವಿಚಿತ್ರ ದರ್ಪದಿಂದ ಕೂಡಿರುತ್ತದೆ. "ಏನ್ಲ ಮಾದ ಇವತ್ತೆಂತದ್ಲ ನ್ಯಾಯು?"[೩] ಎಂದು ಕರೆಯುತ್ತಾನೆ. ಅಕ್ಷರದಿಂದ ವಂಚಿತರಾದ ಇಲ್ಲಿನ ದಲಿತರಿಗೆ ತಾವು ಶೋಷಣೆಗೆ ಒಳಗಾಗಿದ್ದೇವೆ ಎಂಬ ಅರಿವು ಕೂಡ ಬರುವುದಿಲ್ಲ. ಇಲ್ಲಿ ಪಂಚಾಯ್ತಿ ಆದ ನಂತರ ಕರಿಯನು ಪಂಚಾಯ್ತಿಯಲ್ಲಿ ಕೆಂಚನಿಗಾದ ಅಪಮಾನ, ಹಿಂಸೆ, ನೋವು ತನ್ನ ಜನಾಂಗಕ್ಕೆ ಆದದ್ದು ಎಂದು ಅರಿಯಲಾರದವನಾಗಿದ್ದಾನೆ. ಅದಕ್ಕೆ ಪ್ರತಿಯಾಗಿ 'ರಾತ್ರನಾಗ ಸರಿಯಾಗಿ ಮಾಡಿದ್ರಿ ಬುಡಪ್ಪ' ಎಂದು ತನ್ನ ದಣಿಯನ್ನು ಮೆಚ್ಚುತ್ತಾ "ಕೇರಿಯೆಲ್ಲ ಅವಂದೆ ಆಗ್ಬುಟ್ಟಿತ್ತು ಮನಸಾ ಅಂದ್ರೆ ಅಂಗೆ ಮರಿಬ್ಯಾಡ್ದು– ಈ ಕಾಲದ ಐಕಳು ವಸಿ ಗೊನೆಗೆ ನೀರಿಳಿತು ಅಂದ್ರೆ ಸಾಕು ಕಂಡವರ ಹೆಂಡ್ತಿರ್ನೆಲ್ಲ ನಾವೆ ಆಳ್ತೀವಿ ಅಂತ ವದರಾಡ್ತವೆ"[೪] ಎನ್ನುವ ನಿಲುವನ್ನು ಮುಗ್ಧವಾಗಿ ತಾಳುತ್ತಾನೆ. ಕರಿಯನು ಚಂದ್ರೇಗೌಡ ರಾತ್ರಿ ಕೆಂಚನಿಗೆ ಹೊಡೆದದ್ದು ಸರಿಯೆಂದು ಭಾವಿಸುತ್ತಾನೆ.

ಸಾಂಸ್ಕೃತಿಕ ಹಬ್ಬವಾದ ಓಕಳಿ ಆಟವು ಹಿಂದಿನಿಂದಲೂ ಹೊಸೂರು ಮತ್ತು ಕೊಪ್ಪಲಿನ ನಡುವೆ ನಡೆಯುತ್ತಾ ಬಂದಿದೆ. ಈ ಸಾಂಸ್ಕೃತಿಕ ಹಬ್ಬದ ಆಟ ಬೇರೆ ರೂಪಕ್ಕೆ ತಿರುಗಿದ್ದು ದುರಂತವೆನಿಸುತ್ತದೆ. ಈ ಆಟದಲ್ಲಿ ಎರಡು ಗುಂಪುಗಳಾಗುತ್ತಾರೆ. ಹೊಸೂರಿನ ಗುಂಪಿಗೆ ಶಿವಗಂಗ ನಾಯಕನಾದರೆ, ಕೊಪ್ಪಲಿನ ಗುಂಪಿಗೆ ಚಂದ್ರೇಗೌಡ ನಾಯಕನಾಗುತ್ತಾನೆ. ಎಲ್ಲರೂ ಚಂದ್ರೇಗೌಡ ಕಟ್ಟಿದ ಹಂಡೆಯ ಬಗ್ಗೆ 'ಅವರಪ್ಪನ ಕಾಲದಿಂದಲೂ ಅದು ಎತ್ಲಾಗೆ ಬಿಸಾಡಿದ್ರು ಸರಿಯಾದ ಹೊಡೆತನೆ' ಎಂದೆಲ್ಲಾ ಪ್ರತಿಕ್ರಿಯಿಸುತ್ತಾರೆ. ಕೊನೆಗೆ ಕೊಪ್ಪಲಿನ ಕಡೆಯವರ ಕೈ ಮೇಲಾದಾಗ ಚೆನ್ನೂರ ಮತ್ತು ಶಿವಗಂಗರು ರೋಷದಿಂದ ಆಡುತ್ತಾರೆ. ಆಟಕ್ಕೆ ರಂಗೇರಿ ಎಲ್ಲರೂ ರಾಕ್ಷಸರ ರೀತಿ ಹೊಡೆದಾಡುತ್ತಾರೆ. ನೀರಿನಲ್ಲಿ ಹೊಡೆಯುವ ಬದಲು ಹಂಡೆಯಲ್ಲೇ ಹೊಡೆದಾಡುತ್ತಾರೆ. ತಮ್ಮ ಹಳೆಯ ದ್ವೇಷ ಮಾತ್ಸರ್ಯಗಳಿಗೆ ಸರಿಯಾದ ಕಾಲವೆಂದು ತಿಳಿದು ಚೆನ್ನೂರ ಬೇಕೆಂದೆ ಚಂದ್ರೇಗೌಡನ ಎಡತೋಳಿಗೆ ಅಂಚು ಕಟ್ಟಿದ್ದ ತನ್ನ ಹಂಡೆಯಿಂದ ಮಾಂಸ ಕಿತ್ತುಬರುವಂತೆ ತಿವಿದು, ಅಂಗಳದಿಂದ ಹಾರಲು ಪ್ರಯತ್ನಿಸುತ್ತಾನೆ. ಅವನನ್ನು ರುದ್ರ ಅನಾಮತ್ತಾಗಿ ಎತ್ತಿ ಒಗೆಯುತ್ತಾನೆ. ಎಲ್ಲರೂ ಚೆನ್ನೂರನನ್ನು ತುಳಿಯುತ್ತಾರೆ. "ಕೆಳಗೆ ಬಿದ್ದಿದ್ದ ಚೆನ್ನೂರನನ್ನು ಎಲ್ಲಾ ತುಳಿದು ಬಜ್ಜಿ ಮಾಡಿಬಿಟ್ಟಿದ್ದರು. ಅವನ ಈ ಸ್ಥಿತಿಗೆ ಜನರು ಕಣ್ಣೀರು ಹಾಕುವ ಬದಲು ಆತನನ್ನೇ ಬೈಯುತ್ತಿದ್ದರು. ಹಂಡೆ ಕಟ್ಟಿದ್ದ ಒಬ್ಬೊಬ್ಬರನ್ನು ಮೂರು ನಾಕು

ಜನ ಹಿಡಿದು ನಿಂತಿದ್ದರು. ಯಾರಕೈ ಮೈ ನೋಡಿದರೂ ರಕ್ತವೇ”[೫]. ಸೋತ ಚೆನ್ನೂರ ಮತ್ತು ಶಿವಗಂಗರು ಪೋಲಿಸ್‌ಗೆ ದೂರು ನೀಡಿ ರುದ್ರ ಮತ್ತು ಚಂದ್ರೇಗೌಡನನ್ನು ಬಂಧಿಸುತ್ತಾರೆ. ಮನುಷ್ಯರ ನಡುವಿನ ಸಂಘರ್ಷ ವ್ಯಕ್ತಿಗಳನ್ನು ಯಾವ ನೀಚ ಕೃತ್ಯಕ್ಕೆ ಬೇಕಾದರೂ ಇಳಿಸುತ್ತದೆ ಎಂಬುದಕ್ಕೆ ಈ ಪ್ರಕರಣವೇ ಸಾಕ್ಷಿ.

ಮುಗ್ಧೆಯಾದ ಕಮಲಮ್ಮ ಮೊದಲಿನಿಂದಲೂ ತನ್ನ ಗಂಡನ ಅನಾಧಾರಕ್ಕೆ ಒಳಗಾಗಿದ್ದಳು. ತನ್ನ ಗಂಡ ಪಕ್ಕದ ಊರಿನ ಬಸಕ್ಕನ ಜೊತೆ ಸಂಬಂಧ ಹೊಂದಿದದ್ದು ಈಕೆಗೆ ಗೊತ್ತಿತ್ತು. ಅದನ್ನು ತಪ್ಪಿಸಬೇಕೆಂದು ಪೂಜೆ ಹಾಕಿಸಿದರೆ ಒಳ್ಳೆಯದೆಂದು ನಂಬಿದ್ದಳು. ಈಗಲೂ ಗಂಡನ ಒಳಿತಿಗಾಗಿ ಊರ ಹೊರಗಿನ ಗುಡಿಕಟ್ಟೆ ದೇವಸ್ಥಾನಕ್ಕೆ ಕಿಟ್ಟಿಯನ್ನು ಕರೆದುಕೊಂಡು ಮಬ್ಬುಗತ್ತಲೆಯಲ್ಲಿ ಪೂಜೆ ಹಾಕಿಸಲು ಹೊರಡುತ್ತಾಳೆ. ಒಂದು ದಿನ ಹುಣಿಸುಳ್ಳಿ ಮೆಳೆ ದಾಟುತ್ತಿದ್ದ ಹಾಗೆ ಮೂರು ನಾಕು ಜನ ದಿಢೀರನೆ ನುಗ್ಗಿ ಮೇಲೆ ಬಿದ್ದರು. ಕಿರುಚಿಕೊಳ್ಳಲೂ ಆಗದಂತೆ ಉಸಿರುಕಟ್ಟಿತು. ಇನ್ನೊಬ್ಬ ಕಿಟ್ಟಿಯ ಮುಸುಡಿ ಬಜ್ಜಿಯಾಗುವ ಹಾಗೆ ಹಿಂಡಿ, ಹಿಡಿದು ಅನಾಮತ್ತಾಗಿ ಮೇಲೆತ್ತಿಕೊಂಡು ಅಲ್ಲೇ ಇದ್ದ ಮಾವಿನ ಮರದಡಿಯತ್ತ ನಡೆದ. ಅತ್ತೆ ಒದರಾಡಿದರೂ ಬಿಡದೆ ಅವರ ಬಾಯಿಯನ್ನು ಮುಚ್ಚಿ ದರದರ ಮರದಡಿಗೆ ಎಳೆದು ತಂದರು. ಕಿಟ್ಟಿಯ ಕಣ್ಣುಗಳಲ್ಲಿ ರಕ್ತ ತುಂಬಿಕೊಂಡಿತು. “ಅವರೆಲ್ಲ ರಾಕ್ಷಸರೇ ಅನ್ನುವುದು ಖಚಿತವಾಗಿ ಬಿಟ್ಟಿತು ಅವನಿಗೆ. ಒಣಗಿದೆಲೆಯ ರಾಶಿಯ ಮೇಲೆ ಅತ್ತೆಯನ್ನು ರಪ್ಪನೆ ಕೆಡವಿದರು”.[೬] ಭೂಮಿ ಮತ್ತು ಹೆಣ್ಣಿನ ಸಂಬಂಧದಲ್ಲಿ ಆರಂಭವಾಗುವ ಮಾತ್ಸರ್ಯ, ದ್ವೇಷ, ಸಂಘರ್ಷಗಳು ಅಂತಿಮವಾಗಿ ಎಂತಹ ನೀಚ ಪ್ರವೃತ್ತಿಗೆ ಎಳೆದೊಯ್ಯುತ್ತದೆ ಎಂಬುದು ಈ ಬಗೆಯ ದುರಂತ ಚಿತ್ರಣಗಳ ಮೂಲಕ ಪರಿಣಾಮಕಾರಿಯಾಗಿ ನಿರೂಪಿತವಾಗಿದೆ.

“ಪರಸಂಗದ ಗೆಂಡೆತಿಮ್ಮ” ಕಾದಂಬರಿಯನ್ನು ವಿಶ್ಲೇಷಿಸಿದಾಗ ನಾಗರೀಕತೆಯ ಪ್ರವೇಶದಿಂದ ಬದುಕನ್ನು ಸಾರ್ಥಕಪಡಿಸಿಕೊಳ್ಳಬೇಕೆಂಬ ಧ್ವನಿ ಇದ್ದರೂ, ಈ ಪ್ರವೇಶದಿಂದ ಹಳ್ಳಿಯ ನಿರಾತಂಕ ಬದುಕು ಸಂಪೂರ್ಣ ಕಲಿಕಿಬಿಟ್ಟಿತೇನೋ ಎಂಬ ತೀವ್ರಾತಂಕವೆ ಪ್ರಧಾನವಾಗಿರುವುದನ್ನು ಕಾಣುತ್ತೇವೆ. “ಪರಸಂಗದ ಗೆಂಡೆತಿಮ್ಮ ಕಾದಂಬರಿಯಲ್ಲಿ ನಾಗರೀಕತೆಯನ್ನು ಮುಗ್ಧತೆಯ ಶತ್ರುವೆಂಬಂತೆ ಚಿತ್ರಿಸಲಾಗಿರುವ ಭಯಂಕರ ಪ್ರತಿಗಾಮಿ ಧೋರಣೆಯಿದೆ. ಬಾಡಿ, ಲಂಗ, ಗಮನದೆಣ್ಣೆ, ಇತ್ಯಾದಿಗಳಿಂದ ಹಿರಿಯರಿಗೆ ಮುಜುಗರವೂ, ಕಿರಿಯರಿಗೆ ಮುದವೂ ಆಗಿ ನಾಗರೀಕತೆಯಿಂದ ಭೌತಿಕಾಂಶ ಸ್ಪಷ್ಟವಾಗಿ ಅದರ ಚೇತೋಹಾರಿ

ಅಂತರ್ಮುಖತ್ವ ಕಾಣೆಯಾಗುತ್ತದೆ".[೭] ಎಂಬ ಕೆ.ಎಸ್. ಭಗವಾನ್‌ರವರ ಮಾತುಗಳು ಚರ್ಚೆಗೆ ಅರ್ಹವುಳ್ಳವಾಗಿವೆ. ಆಲನಹಳ್ಳಿಯವರು ವಾಸ್ತವವಾಗಿ ತಮ್ಮ ಬದುಕಿನಲ್ಲಿ ಪ್ರಗತಿಪರ ಆಲೋಚನೆಯವರು ಅರ್ಥವಿಲ್ಲದ, ಜಟ್ಟುಗಟ್ಟಿದ ಸಂಪ್ರದಾಯ, ನಂಬಿಕೆ, ಆಚಾರ-ವಿಚಾರಗಳ ಬಗ್ಗೆ ತಾತ್ಸಾರದಿಂದಲೇ ಇರುತ್ತಿದ್ದರು. ನಾಗರೀಕ ವಸ್ತುಗಳು ಸಾಲುಂಡಿಯನ್ನು ಪ್ರವೇಶಿಸಿದಾಗ ಇಡೀ ಊರಿನಲ್ಲಿ ಆಗುವ ತಲ್ಲಣ, ಗೊಂದಲ, ಜಗಳಗಳು-ಮುಂತಾದವುಗಳನ್ನು ಸಹಜವಾಗಿಯೇ ಚಿತ್ರಿಸಿದ್ದಾರೆ.

ಗೆಂಡೆತಿಮ್ಮನು ಮರಂಕಿಯನ್ನು ಮದುವೆಯಾಗಬೇಕೆಂದು ಮೊದಲು ನೋಡಿದಾಗ ಊಂ ಆ ಕೆಂಚಿ ಕಟ್ಕಂಡು ನಾನು ಕಾಲ ಆಗ್ದಂಗೆ ಎಂದು ತನ್ನ ಮನಸ್ಸಿನಲ್ಲಿ ಅಂದುಕೊಂಡಿದ್ದ ಮಾತು ಮುಂದೆ ನಿಜವಾಗುತ್ತದೆ. ಆಕೆ ಗೆಂಡೆತಿಮ್ಮನಿಂದ ಸುಖವನ್ನು ಪಡಲಾಗದೆ ಮಹದೇವ ನಾಯಕ ಮತ್ತು ಶಿವಣ್ಣನೊಡನೆ ಸಂಬಂಧ ಇಟ್ಟುಕೊಂಡು ತನ್ನ ಲೈಂಗಿಕ ತೃಷೆಯನ್ನು ಹಿಂಗಿಸಿಕೊಳ್ಳುತ್ತಾಳೆ. ಶಿವಣ್ಣ ಮತ್ತು ಮರಂಕಿಯರ ಸಂಬಂಧದ ಬಗೆಗೆ ಕೆಲವರು ಗುಲ್ಲೆಬ್ಬಿಸಿದಾಗ ಗೆಂಡೆತಿಮ್ಮನು ಅಪಮಾನ, ಅಳುಕು, ಭಯ, ಹಿಂಸೆಗೆ ಒಳಗಾಗುತ್ತಾನೆ. ಆತ ಎಷ್ಟೇ ಮುಗ್ಧನಾದರೂ ಅವರವರದೇ ಆದ ಸ್ವಾಭಿಮಾನ ಪ್ರತಿಯೊಬ್ಬರಿಗೂ ಇದ್ದೇ ಇರುತ್ತದೆಂಬುದನ್ನು ಲೇಖಕರು ಗೆಂಡೆತಿಮ್ಮನ ಪಾತ್ರದ ಮೂಲಕ ಪರಿಚಯಿಸುತ್ತಾರೆ. "ಆ ಮಗಂಗೆ ಉಟ್ನಿಲ್ಲ ಅನ್ನಸ್ದೇ ಬಿಟ್ಟೇನ? ಏನೊ ಪ್ರೋಗ್ಲಿ ಅಂದ್ರೆ ಅವನವ್ವನ್ನಾ...... ಅಲ್ಲಿ ತನ್ಕ ಒಂದ್ನ ಮಗ...... ಎಂದು ಉರಿಯುತ್ತಾ...... ಗೆಂಡೆತಿಮ್ಮನಿಗೆ ಮನಸ್ಸಿನಲ್ಲಿ ಅವನ ಮಾತೇನಾದ್ರೂ ನಿಜವಾಗಿದ್ದರೆ ಅಂತ ಅನ್ನಿಸಿ ಒಳಗೇ ನಡುಗಿದ".[೮] ಇಲ್ಲಿ ಕಾಳ ಮಾತಾಡಿದ್ದ ಮಾತುಗಳ ಬಗ್ಗೆ ಗೆಂಡೆತಿಮ್ಮನಿಗೆ ಸಣ್ಣ ಅಳುಕು ಇದೆ. ಈ ಘಟನೆಯನ್ನು ಲೇಖಕರು ಸಂಕೇತದ ಮೂಲಕ ಹೀಗೆ ಚಿತ್ರಿಸುತ್ತಾರೆ. ಗೆಂಡೆತಿಮ್ಮ ಹಬ್ಬದ ರಾತ್ರಿ ಸಾಲುಂಡಿಯಲ್ಲಿ ಮಾಲೇಗೌಡರ ಜಗಲಿಯ ಮೇಲೆ ಮಲಗಿದ್ದಾಗ ಮರಂಕಿಗೆ ಒಂದು ದೊಡ್ಡ ಘಟಸರ್ಪ ಸುತ್ತಿಕೊಂಡಂತೆ, ತಾನು ಭಯದಿಂದ ಕಿರುಚುತ್ತ ಬಿಡಿಸಿಕೊಳ್ಳಬೇಕೆನ್ನುವಷ್ಟರಲ್ಲಿ ಮರಂಕಿಯೇ ಘಟಸರ್ಪವಾಗಿಬಿಟ್ಟಂತೆ ಕನಸ್ಸನ್ನು ಕಾಣುತ್ತಾನೆ. ಮುಂದೆ ಗೆಂಡೆತಿಮ್ಮನ ಪಾಲಿಗೆ ಮರಂಕಿ ಘಟಸರ್ಪವಾಗಿಯೇ ಬಂದು ಗೆಂಡೆತಿಮ್ಮನ ಪ್ರಾಣವನ್ನು ಬಲಿತೆಗೆದುಕೊಳ್ಳುವುದನ್ನು ಕಾಣಬಹುದು.

ನಾಗರೀಕ ವಸ್ತುಗಳ ಪ್ರವೇಶದಿಂದ ಸಾಲುಂಡಿಯ ಕೆಲವು ಜನರು ಗೆಂಡೆತಿಮ್ಮನ ಶತ್ರುಗಳಾಗುತ್ತಾರೆ. ಸಾಲುಂಡಿಯ ಹೆಣ್ಣುಮಕ್ಕಳ ಆಸೆಯಂತೆ ಹಿರಿಯರಿಗೆ ಗೊತ್ತಾಗದಂತೆ

ನಾಗರೀಕ ವಸ್ತುಗಳನ್ನು ತಂದುಕೊಡುತ್ತಿರುತ್ತಾನೆ. ಆ ಮನೆಗಳಲ್ಲಿ ಈ ವಸ್ತುಗಳ ಪ್ರವೇಶದಿಂದ ಅತ್ತೆ-ಸೊಸೆಯರ ಜಗಳ, ಅಪ್ಪ-ಮಕ್ಕಳ ನಡುವೆ ವೈಮನಸ್ಸು ಹುಟ್ಟುತ್ತದೆ. ಇದರ ಪರಿಣಾಮವಾಗಿ ಗೆಂಡೆತಿಮ್ಮನಿಂದಲೇ ನಮ್ಮ ಮನೆಯಲ್ಲಿ ಈ ರೀತಿಯ ಸಮಸ್ಯೆಗಳು ಹುಟ್ಟಿಕೊಂಡಿವೆ ಎಂದು ಭಾವಿಸಿದ ಹಿರಿಯರು ಪಂಚಾಯ್ತಿ ಸೇರಿಸಿ ಗೆಂಡೆತಿಮ್ಮನನ್ನು ಹೀನಾಮಾನವಾಗಿ ಬೈಯ್ದು ಅವಮಾನಿಸುತ್ತಾರೆ. ಕೆಂಡಗಣ್ಣಪ್ಪನೆಂಬುವವನು 'ಮನೆಹಾಳ್ಮಾಡೊ ಸೂಳೆಮಗ' ಎಂದು ಗೆಂಡೆತಿಮ್ಮನಿಗೆ ಒದ್ದೇಬಿಡುತ್ತಾನೆ. "ಗೆಂಡೆತಿಮ್ಮನಂತೂ ನ್ಯಾಯದವರ ಮುಂದೆ ಕೈಮುಗಿದು ನಿಂತು ಬಿಕ್ಕಿ ಬಿಕ್ಕಿ ಅಳುತ್ತ ತಿಳೀದೆ ಮಾಡ್ಬುಟ್ಟೆ ಕಣ್ರಪ್ಪ, ನೀವು ತಿಳಿದವ್ರು ಈ ದಿಕ್ಕಿಲ್ಲದ ಪರದೇಸಿ ತಪ್ಪೆಲ್ಲ ವಟ್ಟೆಗಾಕಬುಡಿ, ಇನ್ನೊಂದು ಸಲ ಈ ಪಾಪಕ್ಕೆ ಕೈಯಿಟ್ರೆ ನನ್ನ ಕೈಗೆ ನಾಗರಾವು ಕಡೀಲಿ ಎಂದು ನ್ಯಾಯದವರ ಕಡೆ ಆರ್ತವಾಗಿ ನೋಡಿದ".[6] ಹೀಗೆ ಬೇಡಿಕೊಂಡರೂ ಬಿಡದೆ ಐವತ್ತು ರೂಪಾಯಿ ದಂಡ ವಿಧಿಸುತ್ತಾರೆ. ಗೆಂಡೆತಿಮ್ಮನ ಸ್ವಭಾವವನ್ನು ಹೆಚ್ಚು ಬಲ್ಲವನಾದ ಮಾಲೇಗೌಡ ಸಹ ಏನಾದರೂ ಮಾತಾಡಿದರೆ ತನ್ನ ಮಗಳ ಮದುವೆಗೆ ತೊಂದರೆಯಾಗಬಹುದೆಂದು ಭಾವಿಸಿ ದಂಡದ ಹಣವನ್ನು ಕೊಡುವುದಕ್ಕಷ್ಟೇ ತೃಪ್ತರಾಗುತ್ತಾರೆ. ತನಗೆ ಇಷ್ಟೆಲ್ಲಾ ಅಪಮಾನಗಳಾಗುತ್ತಿದ್ದರೂ ಹೊಸ ವಸ್ತುಗಳನ್ನು ಆ ಊರಿನ ಹೆಣ್ಣು ಮಕ್ಕಳ ಒತ್ತಾಯದಿಂದ ಮಾತ್ರ ತಂದುಕೊಟ್ಟನೆಂದು ಹೇಳಲು ಗೆಂಡೆತಮ್ಮನು ಧೈರ್ಯವಿಲ್ಲದವನಾಗಿದ್ದಾನೆ. ಇದಕ್ಕೆ ಅವನ ಮುಗ್ಧತೆ ಮತ್ತು ಭಯಗಳೆರಡೂ ಕಾರಣವಾಗಿದೆ ಎನಿಸುತ್ತದೆ. ಪಂಚಾಯ್ತಿಯಲ್ಲಿ ಆದ ಅಪಮಾನದಿಂದ ಬೆಳಗ್ಗೆ ಎದ್ದು ಈ ಊರಿನಲ್ಲಿ ಮುಖ ತೋರಿಸುವುದು ಕಷ್ಟವಾಗಿ, ರಾತ್ರಿಯಲ್ಲಿ ಕಾಡು, ಮೇಡು, ಗಿಡ, ಗುಡ್ಡ, ಬೆಟ್ಟ, ಮುಳ್ಳುಮರ ಇವಾವುಗಳನ್ನು ಲೆಕ್ಕಿಸದೆ ನಿದ್ರೆಗೆಟ್ಟು ನಡೆಯುತ್ತಾನೆ. ಕೋಳಿಕೂಗುವ ಹೊತ್ತಿಗೆ ಬಳಲಿ ಬೆಂಡಾಗಿ ಬಂದು ತನ್ನ ಮನೆಯ ಕದ ತಟ್ಟುತ್ತಾನೆ. ಮರಂಕಿಯು ಶಿವಣ್ಣನೊಡನೆ ರತಿಸುಖದಲ್ಲಿ ಮುಳುಗಿದ್ದಾಳೆ, ಯಾವುದರ ಬಗ್ಗೆ ಇಷ್ಟು ದಿನ ಸಣ್ಣ ಗುಮಾನಿಯಿತ್ತೋ ಅದು ಕಣ್ಣೆದುರೆ ಸಾಬೀತಾಗುತ್ತದೆ. ಇದರಿಂದ ನೊಂದ ಗೆಂಡೆತಿಮ್ಮ ತನ್ನ ಅಂತ್ಯವನ್ನು ತಾನೇ ಕಂಡುಕೊಳ್ಳುತ್ತಾನೆ. ಸಾಲುಂಡಿಯ ಜನ ಈತನ ಸಾವಿನ ಬಗ್ಗೆ ಕೇಳಿದ ನಂತರ ನ್ಯಾಯಸ್ಥರನ್ನು ಕೊಲೆಗಡುಕರೆಂದೇ ಭಾವಿಸುತ್ತಾರೆ, ಸ್ವತಃ ನ್ಯಾಯಸ್ಥರೇ ಪಾಪಪ್ರಜ್ಞೆಗೆ ಒಳಗಾಗುತ್ತಾರೆ.

ಗೆಂಡೆತಿಮ್ಮ ತನ್ನ ಹೆಂಡತಿ ಬಳಸುತ್ತಿದ್ದ ಪ್ಯಾಟೆಯ ವಸ್ತುಗಳಿಂದ ಮನೆಯಲ್ಲಿ ಉಂಟಾದ ಜಗಳವನ್ನು ದೇವೀರವ್ವನಿಗೆ ವಿವರಿಸಿದಾಗ-ಅವಳು 'ನಿನ್ನ ಹೆಂಡತಿಯದೆ ತಪ್ಪು' ಎಂದು ಅಭಿಪ್ರಾಯಪಡುತ್ತಾಳೆ. ಆದರೆ ಮುಂದೆ ತನ್ನ ಮಗಳ ಮದುವೆ ಮೈಸೂರಿನಹುಡುಗನ

ಜೊತೆ ನಡೆಯಬೇಕೆಂದು ಆ ಪ್ಯಾಟೆಯ ವಸ್ತುಗಳನ್ನು ತಂದುಕೊಡುವಂತೆ ಅಪೇಕ್ಷಿಸುವುದನ್ನು ಕಾಣಬಹುದು. ಬೇದಿಯಮ್ಮ ತಾನೇ ಸ್ವತಃ ಮರಂಕಿಯುನ್ನು ತನ್ನ ಮನೆಯ ಸೊಸೆಯಾಗಿ ಮಾಡಿಕೊಳ್ಳಬೇಕೆಂದು ಇಷ್ಟಪಟ್ಟವಳಾದರೂ, ಮರಂಕಿಯ ಸ್ವಭಾವದಿಂದ ತನ್ನ ಅತ್ತೆತನಕ್ಕೆ ಧಕ್ಕೆಯಾಗುತ್ತದೆ ಎಂದುಕೊಳ್ಳುತ್ತಾಳೆ. ಇವರಿಬ್ಬರ ನಡುವಿನ ಜಗಳ ಸರ್ವೆ ಸಾಮಾನ್ಯವಾಗುತ್ತದೆ. ತಮ್ಮ ಅಸ್ಥಿತ್ವದ ಹೋರಾಟದಲ್ಲಿ ಅತ್ತೆ-ಸೊಸೆಯುರು, ವಾರಗಿತ್ತಿಯರು ಅಣ್ಣ ತಮ್ಮಂದಿರ ನಡುವೆ ಸಂಘರ್ಷಗಳು ಇಲ್ಲಿ ಸರ್ವೆ ಸಾಮಾನ್ಯವಾಗಿದೆ. ನಾಗರೀಕ ವಸ್ತುಗಳು ಸಾಲುಂಡಿಯನ್ನು ಪ್ರವೇಶಿಸಿದಾಗ ಇಡೀ ಉರಿನಲ್ಲಾಗುವ ತಲ್ಲಣ, ಗೊಂದಲ, ಜಗಳ ಮುಂತಾದವುಗಳ ಚಿತ್ರಣ ಸಹಜವಾಗಿ ಮೂಢಿ ಬಂದಿದೆ.

ಆಲನಹಳ್ಳಿಯವರೆ ಕಾದಂಬರಿಯ ಕೊನೆಯಲ್ಲಿ ಹೇಳುವ "ಗೌವ್ವಳ್ಳಿಯಂತಹ ಕಗ್ಗಾಡು ಕೊಂಪೆಯ ಯಾವ ಕೇರಿಗೆ ಹೋದರೂ ಮರಂಕಿ ಬಿತ್ತಿದ ಬಯಕೆಗಳು ಬೆಳೆದು ಹೂಬಿಟ್ಟು ನಿಂತಿವೆ, ಗೌವ್ವಳ್ಳಿಗೆ ಇಷ್ಟರಲ್ಲಿ ಬಸ್ಸಿನ ದಾರಿಯೂ ಆಗಿ ಊರ ಹಿರಿಯರು ಎಷ್ಟು ಬಗೆಯಿಂದ ತಡೆದರೂ ಲೆಕ್ಕಿಸದೆ ಅವರ ಕಲ್ಪನೆಯ ಅನಿಷ್ಟ ಶಕ್ತಿಗಳು ನುಗ್ಗಿ ಆಕ್ರಮಿಸುವುದಿರಲಿ, ಊರೇ ತಾನಾಗಿ ಆ ಶಕ್ತಿಗಳನ್ನೆಲ್ಲ ಆವಾಹನೆ ಮಾಡತೊಡಗಿದೆ. ಊರಿಗೊಬ್ಬಳೋ ಇಲ್ಲವೇ ಕೇರಿಗೊಬ್ಬಳೊ ಮರಂಕಿಯಿದ್ದ ಊರಿನಲ್ಲೀಗ ಪ್ರತಿ ಮನೆ ಮನೆಯಲ್ಲೂ ಅನೇಕ ಮರಂಕಿಯರು ಅವತರಿಸಿ ಬಿಟ್ಟಿದ್ದಾರೆ"[೧೦] ಎಂಬ ಮಾತಿನಲ್ಲಿ ಅವುಗಳೆಲ್ಲರನ್ನು ಮೀರಿದ ನಾಗರೀಕ ಬದುಕಿನ ಹೊಸ ಆಶಯುಗಳ ಚಿಂತನೆಯಾಗುವುದನ್ನು ನಾವು ಸ್ಪಷ್ಟವಾಗಿ ಗುರುತಿಸಬಹುದು.

"ಭುಜಂಗಯ್ಯನ ದಶಾವತಾರ" ಕಾದಂಬರಿಯಲ್ಲಿ ಭುಜಂಗಯ್ಯ ಎಂಬ ಸಾಮಾನ್ಯ ವ್ಯಕ್ತಿಯೊಬ್ಬನು ಸಮಾಜದೊಂದಿಗೆ, ವ್ಯವಸ್ಥೆಯೊಂದಿಗೆ, ಪರಿಸ್ಥಿಯೊಂದಿಗೆ, ಜಾತಿ ವ್ಯವಸ್ಥೆಯೊಂದಿಗೆ, ಮನುಷ್ಯರೊಂದಿಗೆ, ಪಟ್ಟಭದ್ರ ಹಿತಾಸಕ್ತಿಯೊಂದಿಗೆ ಒಂದಲ್ಲಾ ಒಂದು ರೀತಿಯ ಸಂಘರ್ಷಕ್ಕೆ ಒಳಗಾಗುತ್ತಾನೆ. ಈತ ಉತ್ತಮವಾದ ಬದುಕಿಗೆ ಸದಾ ತುಡಿಯುವ ಮನೋಧರ್ಮದವನಾಗಿರುತ್ತಾನೆ. ಈತ ಹೋಟೆಲ್ ಉದ್ಯಮವನ್ನು ಆರಂಭಿಸಬೇಕೆಂದುಕೊಂಡಾಗ ಎಲ್ಲರೂ ಇವನ ಅಭಿಪ್ರಾಯಕ್ಕೆ ವಿರೋಧ ವ್ಯಕ್ತಪಡಿಸುತ್ತಾರೆ. ಆತನ ಮಾವ ಇದೊಂದು ದೊಡ್ಡ ಅಪವಾಧವೆಂದೆ ಭಾವಿಸುತ್ತಾನೆ. "ಮದುವೆಗೆ ಮುಂಚೆ ಸುಮಾರು ಜನ ಅಂದಿದ್ದು ನಿಜಾ ಬುಡು. ಮನೆ ಬಿಟ್ಕೋಡೋಗಿ ಅಲ್ಲಿ ಎಂಜಲೆಲೆ ನಕ್ಕೊಂಡು ಬಿದ್ದಿದ್ದು, ತಿರುಗಿ ಬಂದಿದ್ದು ಮತ್ತೆ ನೆಪ್ಪಾಯ್ತು ಅಂತ ಕಾಣ್ತದೆ. ಗಿರಾಸ್ತನಂಗೆ ನಡ್ಕೊ ಈ ಪತ್ರಾವಳಿ ಕೆಲ್ಸಕ್ಕೆ ಇಳ್ದು ತಿರ್ಗ್ಗ ಥೂ ಅನ್ನಸ್ಕೋ ಬ್ಯಾಡ"[೧೧] ಎಂದು ಸಿಟ್ಟಾಗುತ್ತಾನೆ.

ಇವರೆಲ್ಲರಿಗೂ ಹೋಟೆಲಿಟ್ರೆ ಜಾತಿಗೆಡುವ ಭಯವಿದೆ, ಆದರೆ ಭುಜಂಗಯ್ಯನಿಗೆ ಮಾತ್ರ ಹೋಟೆಲ್ ಇಡುವುದು, ಹವ್ಯಾಸ, ಸಾಹಸ ಹಾಗೂ ಹೊಸ ಉತ್ಪಾದನೆಯ ಮುಂದುವರಿದ ಒಂದು ಮಾರ್ಗವಾಗಿದೆ. ಈ ಜಾತಿ, ಮತ, ಧರ್ಮ ಇವುಗಳೆಲ್ಲ ಬಂಡವಾಳವಿಲ್ಲದ ಬಡಾಯಿ. ಇದು ಯಾವತ್ತಿದ್ದರೂ ಬಿದ್ದುಹೋಗುತ್ತದೆ. ಆದರೆ ಹೊಸ ಉತ್ಪಾದನಾ ಕ್ರಮದಿಂದ ಒಂದು ಅಂತಸ್ತನ್ನು ತಲುಪಬಹುದೆಂಬ ಆಲೋಚನೆ ಭುಜಂಗಯ್ಯನನ್ನು ಅಲುಗಾಡಿಸುತ್ತದೆ. ಎಲ್ಲರ ವಿರೋಧದ ನಡುವೆಯೂ ಈತ ಮಾದಳ್ಳಿಯಲ್ಲಿ ಹೋಟೆಲ್ ಉದ್ಯಮವನ್ನು ಶುರುಮಾಡುತ್ತಾನೆ. ಇದರಿಂದ ಭುಜಂಗಯ್ಯ ಏಳಿಗೆಯನ್ನು ಹೊಂದುತ್ತಾನೆ. ಸುತ್ತಮುತ್ತಲೆಲ್ಲ ಈತನ ಹೆಸರು ಹರಡಿ ಹೆಸರುವಾಸಿಯಾಗುತ್ತಾನೆ. ಗಾಂಧೀಜಿಯವರ ವಿಚಾರಗಳಿಂದ ಪ್ರಭಾವಿತನಾಗುವ ಭುಜಂಗಯ್ಯ ಹೋಟೆಲ್‌ಗೆ ಗಾಂಧೀಜಿಯವರ ಫೋಟೊ ತಂದು ಹಾಕುತ್ತಾನೆ. ಕ್ಯಾತನಹಳ್ಳಿ ಶಾಲೆಯ ಮೇಷ್ಟ್ರು ಹೇಳಿದಂತೆ ಅದೆಷ್ಟೋ ಸ್ವಾಮಿಗಳಿದ್ದಾರಂತೆ ಆದರೆ ಇಡೀ ದೇಶಕ್ಕೆ ಒಬ್ಬರೇ ಗಾಂಧೀಜಿಯವರು ಎಂದು ಈತ ಅರಿತಿರುತ್ತಾನೆ. ಆದರೂ ಭುಜಂಗಯ್ಯನ ಹೋಟೆಲ್‌ನಲ್ಲಿ ಹರಿಜನರನ್ನು ಒಳಕ್ಕೆ ಸೇರಿಸುವುದಿಲ್ಲ. ಇಬ್ಬರಿಗೂ ಪ್ರತ್ಯೇಕವಾದ ವ್ಯವಸ್ಥೆ ಇತ್ತು. ಪಟ್ಟಭದ್ರ ಹಿತಾಶಕ್ತಿಗಳಾದ ರುದ್ರಪ್ಪ ಮತ್ತು ಅವನ ಕಡೆಯವರು ಭುಜಂಗಯ್ಯನ ಹೋಟೆಲನ್ನು ಮುಚ್ಚಬೇಕೆಂದು ಕೇಳುವುದೇ ಅವರ ನೀಚತನದ, ಅವಿವೇಕದ ಪರಮಾವಧಿಯಾಗಿದೆ. ಈ ದೃಶ್ಯವನ್ನು ಕಟ್ಟಿಕೊಡುವ ರೀತಿ ಅಲ್ಲಿನ ಪಾತ್ರಗಳ ಮನೋಭಾವಕ್ಕೆ ಸಹಜವಾಗಿ ಬಂದಿದೆ. "ನಿನ್ನೋಟ್ಲಲ್ಲಿ ಪೊಲೇರ್ನೆಲ್ಲ ವಳೀಕೆ ಕರ್ಕಂಡು, ಅವರು ತಿಂದಿದ್ರಲ್ಲೆ ಉತ್ತಮ್ರುಗೂ ತಿಂಡಿ ಕೊಟ್ಟಂತೇ? ಅಂದಾಗ ಭುಜಂಗಯ್ಯ ಕೊಂಚ ವ್ಯಂಗ್ಯವಾಗಿಯೇ ಓ ಯಾರಪ್ಪ ಅಂತ ಉತ್ತಮ? ಅನ್ನುತ್ತಿದ್ದಂತೆ ಗುಂಪಿನಲ್ಲಿದ್ದ ದ್ಯಾವಣ್ಣ ಸ್ವಲ್ಪ ನಿಗರಿ ನಾನೊ ಕಣೊ ಗ್ರಾಸ್ತ ಅಂತ ಹೆಂಟೆಗೊದ್ದನ ಹಾಗೆ ಕತ್ತಾಡಿಸುತ್ತ ವದರಿದ....."[೧೨] ಈ ಜಗಳದಲ್ಲಿ ಕರೀಗೌಡರಿಗೆ ರುದ್ರಪ್ಪ ಒಡೆಯಲು ಮುಂದಾದಾಗ ಭುಜಂಗಯ್ಯ ರುದ್ರಪ್ಪನ ಕತ್ತಿನಪಟ್ಟಿ ಹಿಡಿದ. ಲೇಖಕರು ಮಾನವೀಯ ಸಂಬಂಧಗಳು ಜಾತಿಯ ಕಟ್ಟನ್ನು ಮೀರಿದವು ಎಂಬುದನ್ನು ಈ ರೀತಿಯ ಘಟನೆಗಳ ಮೂಲಕ ಪರಿಚಯಿಸುತ್ತಾರೆ. ಭುಜಂಗಯ್ಯ ಮೈಸೂರಿಗೆ ಹೋಗಿದ್ದಾಗ, ಈ ವೈಷಮ್ಯದಿಂದ, ಹೋಟೆಲ್ ನಲ್ಲಿ ಮಲಗಿದವರನ್ನು ಹೊರಗೆ ಕಳುಹಿಸಿ, ರಾಜರಸ್ತಾಗಿ ಹೋಟೆಲ್ ಗೆ ಬೆಂಕಿ ಹಾಕಿ ಭಸ್ಮಮಾಡುತ್ತಾರೆ. ಇಲ್ಲಿ ಜಾತಿ ವೈಷಮ್ಯ ಹಾಗೂ ಮಾತ್ಸರ್ಯ ಮಾನವನನ್ನು ಎಂತಹ ಹೀನ ಪ್ರವೃತ್ತಿಗೂ ಇಳಿಸಬಲ್ಲದು ಎಂಬುದು ಇಂತಹ ಚಿತ್ರಣಗಳ ಮೂಲಕ ಕಟ್ಟಿಕೊಡುತ್ತಾರೆ.

ಭುಜಂಗಯ್ಯ ಬಳೆಗಾರ ಶೆಟ್ಟರ ಮಗಳು ಸುಶೀಲೆಯನ್ನು ಮದುವೆಯಾಗುತ್ತಾನೆ. ಇದನ್ನು ಎಲ್ಲರೂ ವಿರೋಧಿಸುತ್ತಾರೆ. ಈತ ಶಿವಾಚಾರಕ್ಕೆ ಸೇರಿದವನು. ಅಂತರ್ಜಾತಿ ವಿವಾಹದಿಂದಾಗುವ ಅವಮಾನ, ಸಮಸ್ಯೆಗಳೆಲ್ಲವೂ ಇವರ ಬಾಳಲ್ಲೂ ಆಗುತ್ತದೆ. ಸುಶೀಲಳು ಭುಜಂಗಯ್ಯನ ಹಿರಿಯ ಹೆಂಡತಿಯ ಮಕ್ಕಳನ್ನು ತನ್ನ ಮಕ್ಕಳೆಂದೇ ಭಾವಿಸಿ ಮನೆಗೆ ಬಂದಾಗ ತಿಂಡಿ, ಊಟ ಹಾಕಿ ಪ್ರೀತಿಯಿಂದಲೇ ಕಾಣುತ್ತಿದ್ದಳು. ಆ ಮಕ್ಕಳು ಸಹ ಬಾಯಿ ತುಂಬ ಚಿಕ್ಕವ್ವ ಎಂದೇ ಕರೆಯುತ್ತಿದ್ದವು. ಇಲ್ಲಿ ಸುಶೀಲಳ ಮಾನವೀಯ ಗುಣಗಳು ಮತ್ತು ಮುಗ್ಧ ಮಕ್ಕಳ ಮನಸ್ಸು ತಿಳಿಯಾಗಿರುವುದನ್ನು ಕಾಣಬಹುದು. ಆದರೆ ಪಾರ್ವತಿ ಮಾತ್ರ ಸವತಿ ಮತ್ಸರದಿಂದ ಜಾತಿಲ್ಲ, ಕುಲಿಲ್ಲ, ಆ ನನ್ನ ಆದರ್‍ಗಿತ್ತಿ ಮನೇಲಿ ತಿನ್ನಕೇನಾಗಿತ್ತು ನಿಮ್ಗೆ? ಆ ಮುಂಡೆ ನಿಮ್ಗೇನಾದ್ರೂ ಮದ್ದುಗಿದ್ದು ಆಕ್ಬುಟ್ರೆ ನನ್ನ ಗತಿಯೇನು ಶಿವ್ನೆ?"[೧೩] ಎಂದುಕೊಳ್ಳುತ್ತಾಳೆ. ಇಲ್ಲಿ ಪಾರ್ವತಿಯ ಸಂಕಟ, ಅತೃಪ್ತಿ, ಸವತಿ ಮತ್ಸರ–ಮುಂತಾದವುಗಳ ಸಹಿತ ಅವಳ ವ್ಯಕ್ತಿತ್ವವನ್ನು ಸರಿಯಾಗಿಯೇ ಅರಿತುಕೊಳ್ಳಬಹುದು. ತನ್ನ ಹಿರಿಯ ಹೆಂಡತಿ ಪಾರ್ವತಿ ಇವನ ಬಗ್ಗೆ ಏನೇ ವಿಷಕಾರಿದರೂ, ಅನಾವಶ್ಯಕವಾಗಿ ಎಂದೂ ಹೊಡೆದುಬಡಿದವನಲ್ಲ. ಪ್ರತಿಯಾಗಿ ಕೆಡುಕನ್ನು ಮಾಡದೆ ಸಹಾನುಭೂತಿಯನ್ನು ತೋರಿಸುತ್ತಾನೆ. ಜೊತೆಗೆ ತನ್ನ ಆತ್ಮವಿಮರ್ಶೆ ಮಾಡಿಕೊಳ್ಳುತ್ತಾನೆ. 'ಪಾರ್ವತಿ ಬುದ್ಧಿ ಇಲ್ಲದ ಹೆಂಗಸು ಅವಳ ಮಾತಿಗೆ ಹಠ ಸಾಧಿಸಿ ತಾನು ಯಾವ ಕೋಟೆ ಗೆಲ್ಲಬೇಕು? ಏನೆ ಆದರೂ ಅವು ನನ್ನ ಮಕ್ಕಳು, ತಾನು ಮಾಡುವುದೆಲ್ಲ ಅವಕ್ಕಾಗಿಯೇ ಅಲ್ಲವೇ' ಎಂಬ ಅವನ ಮಾತುಗಳು ಹೃದಯಾಂತರಾಳದಿಂದ ಬಂದವುಗಳೇ ಆಗಿವೆ. ಆದರೆ ಪಾರ್ವತಿ ಮಾತ್ರ ಸವತಿ ಮಾತ್ಸರ್ಯದಿಂದ ಹೊಂದಿಕೊಂಡು ಹೋಗದಿರುವುದೇ ದೊಡ್ಡ ದುರಂತವೆನಿಸುತ್ತದೆ. ಇವರಿಬ್ಬರ ಸಂಬಂಧ ಎಷ್ಟು ದೂರವಾಗುತ್ತದೆಯೆಂದರೆ ಮಕ್ಕಳು ಸುಶೀಲಳ ಹತ್ತಿರ ಬಂದು ಊಟ ಮಾಡಿದ ವಿಷಯ ಕೇಳಿ ಪಾರ್ವತಿಯು ತನ್ನ ಮಕ್ಕಳಿಗೆ ಬರೆಯನ್ನು ಹಾಕುತ್ತಾಳೆ. ಭುಜಂಗಯ್ಯನಿಗೆ ಕರುಳು ಕಿವುಚಿದಂತಾಗಿ ಪಾರ್ವತಿಯನ್ನು ಕೇಳಿದಾಗ "ನನ್ಮಕ್ಳು ನಾನೇನಾದ್ರು ಮಾಡ್ಕತೀನಿ ಬರೇನಾರ ಆಕ್ತೀನಿ ಇಲ್ಲಾ ಕತ್ತಾದ್ರು ಇಸ್ಕಿ ಸಾಯಿಸ್ತೀನಿ"[೧೪] ಎಂದು ತುಂಬಾ ಕಠಿಣ ಹೃದಯದಿಂದ ಹೇಳುತ್ತಾಳೆ. ಇಲ್ಲಿ ಲೇಖಕರು ಪಾರ್ವತಿಯ ಸವತಿ ಮತ್ಸರ ಮತ್ತು ಅವಳ ಒಳಗುದಿತನವನ್ನು ಅತ್ಯಂತ ಪರಿಣಾಮಕಾರಿಯಾದ ರೀತಿಯಲ್ಲಿಯೇ ಪರಿಚಯಿಸಿದ್ದಾರೆ.

ಹೀಗೆ ಹಲವಾರು ಏಳು ಬೀಳುಗಳ ನಡುವೆಯೂ ಭುಜಂಗಯ್ಯ ಜೀವನದಲ್ಲಿ ಛಲದಿಂದಲೇ ಜೀವನ ಸಾಫಲ್ಯವನ್ನು ಕಂಡುಕೊಂಡು ಬದುಕುತ್ತಿರುತ್ತಾನೆ. ಸುತ್ತಮುತ್ತಲಿನ

ಊರಿಗೆಲ್ಲ ಕಂಟ್ರಾಟುದಾರನಾಗಿ ಕೆಲಸ ಮಾಡುತ್ತಿದ್ದ ಭುಜಂಗಯ್ಯ ತೀರ ಆಕಸ್ಮಿಕವಾಗಿ ಡೈನೊಮೊ ಸಿಡಿದು ಕಣ್ಣು ಕಳೆದುಕೊಂಡ. ನಂತರ ಇವನ ಜೀವನದ ಗತಿಯೇ ಬದಲಾಗುತ್ತದೆ. ಪಾರ್ವತಿ ಸುಶೀಲಳನ್ನು ರಂಡೆ, ಮುಂಡೆ, ಸವತಿ ಎಂದೆಲ್ಲಾ ಬೈಯುತ್ತಿದ್ದರೂ ಸುಶೀಲ ಅವಳ ಬಗ್ಗೆ ಮರೆತು ಪ್ರತಿಯಾಡದಂತಹ ಗಂಭೀರ ಮಹಿಳೆಯಾಗಿ ಚಿತ್ರಿತವಾಗಿದ್ದಾಳೆ. ಪಾರ್ವತಿಯಂತೂ 'ನನ್ನ ತಾಳಿ ಭಾಗ್ಯ ಕಿತ್ಕಂಡಲ್ಲೆ' ಎಂಬ ಮಾತಿನಿಂದ ಸುಶೀಲೆಯನ್ನು ಚುಚ್ಚುವುದು ವಿಷಾದವೆನಿಸುತ್ತದೆ. ಸಹಜವಾಗಿ ನಡೆದಿರುವ ಈ ಘಟನೆಯಿಂದ ಭುಜಂಗಯ್ಯನ ಆಧ್ಯಾತ್ಮಿಕ ಜೀವನದ ವ್ಯಕ್ತಿತ್ವವನ್ನು ಪರಿಚಯಿಸುವುದಕ್ಕೆ ಕಾದಂಬರಿಯಲ್ಲಿ ಈ ಘಟನೆಯನ್ನು ತಂದಿದ್ದಾರೆ. ಆದರೂ ಗಂಡನನ್ನು ಯಾವುದೇ ಕೊಂಕಿಲ್ಲದೆ ಅತ್ಯಂತ ಪ್ರೀತಿ, ಮಮತೆಯಿಂದ ಸಾಕುವ ಸುಶೀಲಳ ಹೃದಯವಂತಿಕೆಯು ಮಹತ್ವವೆನಿಸುತ್ತದೆ. ಪಾರ್ವತಿಯು ಎಷ್ಟು ಕ್ರೂರಿಯಾಗುತ್ತಾಳೆಂದರೆ ತನ್ನ ಗಂಡನಿಗಾದ ಈ ದುರಂತ 'ಅವಳಿಗಾದರೂ ಆಗಬಾರದಿತ್ತೆ' ಎಂದು ಸವತಿ ಮತ್ಸರವನ್ನು ಕಾರುತ್ತಾಳೆ. ಅಲ್ಲದೆ ಸುಶೀಲಳು ಸಾಯಲೆಂದು ಅಮಾವಾಸ್ಯೆಯ ದಿನವೆ ಕಾಡು ಕುರುಬನಿಂದ ಮಾಟ ಮಾಡಿಸುತ್ತಾಳೆ. ಆದರೆ ಅವುಗಳು ಸುಶೀಲಳ ಮೇಲೆ ಪರಿಣಾಮವನ್ನು ಬೀರುವುದಿಲ್ಲ. ಮನುಷ್ಯನ ಮಾತ್ಸರ್ಯ ಅವಳನ್ನು ಎಷ್ಟು ಕೀಳುಮಟ್ಟಕ್ಕೆ ಇಳಿಸುತ್ತದೆ ಎಂಬ ಒಳಸೂಕ್ಷ್ಮ ವಿವರಗಳನ್ನು ಈ ಮೂಲಕ ಪರಿಚಯಿಸಿರುವುದು ಸಹಜವಾಗಿ ಬಂದಿದೆ. ಭುಜಂಗಯ್ಯನು ಕಣ್ಣು ಕಳೆದುಕೊಂಡು ಬದುಕುತ್ತಿದ್ದಾಗ ಇಡೀ ಊರೇ ಅನುಕಂಪಪಡುವಾಗಲೂ ರುದ್ರಪ್ಪ " ಹುಟ್ಟಿದ ಮನೇ ಬುಟ್ಟ, ಕಟ್ಕೊಂಡ ಯೆಡ್ತಿ ಬುಟ್ಟ ಯಾವಳೊ ಇಟ್ಕೊಂಡಿರೊ ಬಡ್ಡೀಗಾಗಿ ಕುಲಾನೆ ಬುಟ್ಟು ಕುಂತವ್ನೆ. ದೇವ್ರೇ ತೋರಿಸ್ದಾ ನೋಡು"[೧೫] ಎನ್ನುವ ಮಾತುಗಳು ಅವನ ಪಶುತ್ವದ ಮನಸ್ಥಿತಿಯನ್ನು ಪರಿಚಯಿಸುತ್ತವೆ. ಜೊತೆಗೆ ಅವನ ನೀಚ ಮನಸ್ಸು ಎಷ್ಟು ಕೀಳುಮಟ್ಟದ್ದಾಗಿದೆ ಎಂದರೆ ಹೇಗಾದರೂ ಮಾಡಿ ಪಾರ್ವತಿಯನ್ನು ಇಟ್ಟುಕೊಂಡು ಬಿಟ್ಟರೆ ಭುಜಂಗಯ್ಯನನ್ನು ತುಳಿದ ಹಾಗೆ ಎಂದೆಲ್ಲ ಯೋಚಿಸುತ್ತಾನೆ. ರುದ್ರಪ್ಪನ ಈ ಮನಸ್ಥಿತಿಯನ್ನು ಗಮನಿಸಿದರೆ ಮನುಷ್ಯನ ಆಂತರ್ಯದಲ್ಲಿ ಅಡಗಿರುವ, ಮಾತ್ಸರ್ಯ ಕ್ಷುದ್ರತನಗಳ ಆಳ ಅಗಲಗಳ ಪರಿಚಯವಾಗುತ್ತದೆ. ಸುಶೀಲ ಎಷ್ಟೇ ತ್ಯಾಗಮಯಿಯಾಗಿ, ಮಾನವೀಯವಾಗಿ ನಡೆದುಕೊಂಡರೂ ಊರಿನವರ ಪಾಲಿಗೆ ಭುಜಂಗಯ್ಯ ಇಟ್ಟುಕೊಂಡವಳೆ ಆಗಿರುತ್ತಾಳೆ. ಸುಶೀಲಳಿಗೆ ಆಂತರ್ಯದಲ್ಲಿ ಈ ಎಲ್ಲ ಒಳನೋವುಗಳು ಇವೆ. ಇಲ್ಲಿ ಭುಜಂಗಯ್ಯ ಅಬಲೆಯಾದ ತನ್ನ ಹೆಂಡತಿ ಸುಶೀಲಳ ಮುಂದಿನ ಜೀವಿತದ ಬಗ್ಗೆ ಸ್ವಲ್ಪವೂ ಯೋಚಿಸದೆ ತಾನೇ ಸಾವನ್ನಪ್ಪುವುದು ವಿಷಾದವೆನಿಸುತ್ತದೆ.

## ಅಡಿ ಟಿಪ್ಪಣಿಗಳು

೨. ಸಮಕ್ಷಮ: ಯು. ಆರ್. ಅನಂತಮೂರ್ತಿ; ಪು. ೧೫೫; ೧೯೮೦

೩. ಕಾಡು: ಶ್ರೀಕೃಷ್ಣ ಆಲನಹಳ್ಳಿ ಪು. ೨೫; ೧೯೮೮

೪. ಅದೇ: ಪು. ೧೮

೫. ಅದೇ: ಪು. ೩೦

೬. ಅದೇ: ಪು. ೮೪

೭. ಅದೇ: ಪು. ೯೨-೯೩

೮. ಕುವೆಂಪು ಯುಗ: ದೇಜಗೌ; (ಪ್ರ. ಸಂ.) ಪು. ೩೦; ೧೯೯೦

೯. ಪರಸಂಗದ ಗೆಂಡೆತಿಮ್ಮ-ಶ್ರೀಕೃಷ್ಣ ಆಲನಹಳ್ಳಿ; ಪು. ಗೆಂಡೆತಿಮ್ಮನನ್ನು ಕುರಿತು ಎಂಬ ಆರಂಭದ ಪುಟದಿಂದ: ಪು.೧೧೫

೧೦. ಅದೇ: ಪು. ೧೫೬

೧೧. ಪರಸಂಗದ ಗೆಂಡೆತಿಮ್ಮ: ಶ್ರೀಕೃಷ್ಣ ಆಲನಹಳ್ಳಿ: ಪು. ೧೭೩; ೧೯೭೪

೧೨. ಭುಜಂಗಯ್ಯನ ದಶಾವತಾರಗಳು: ಶ್ರೀಕೃಷ್ಣ ಆಲನಹಳ್ಳಿ: ಪು. ೨೪-೨೫; ೧೯೮೩

೧೩. ಅದೇ: ಪು. ೩೧೩

೧೪. ಅದೇ: ಪು. ೩೪೨

೧೫. ಅದೇ: ಪು. ೩೪೩

೧೬. ಅದೇ: ಪು. ೪೮೫-೪೮೬

ಪ್ರೀತಿ, ಕಾಮ, ಪ್ರೇಮ, ಕ್ರೌರ್ಯ, ಹಿಂಸೆ, ಭಯ, ಯಾತನೆ ಮುಂತಾದ ಹಲವು ವಿವರಗಳ ಚಿತ್ರಣ ಇವರ ಕಥೆ, ಕಾದಂಬರಿಗಳಲ್ಲಿ ಕಂಡುಬರುತ್ತದೆ. ಇವರ ಬಹುಪಾಲು ಕಥೆಗಳಲ್ಲಿ ಕಾಮವೇ ಪ್ರಧಾನ ಸೆಳೆತವಾಗಿ ಬರುತ್ತದೆ. ಇವರ ಕಥೆಗಳ ನಾಯಕ, ನಾಯಕಿಯರಂತು ಜೀವನವನ್ನು ಅತ್ಯಂತ ಉತ್ಕಟವಾಗಿ ಅನುಭವಿಸುವಂತಹವರು. ಇವರಿಗೆಲ್ಲ ಕಾಮದ ಸೆಳೆತವಿರುವುದರಿಂದಲೇ ಜಾತಿ, ಧರ್ಮ, ವಯಸ್ಸು, ಅಂತಸ್ತು, ಮಡಿವಂತಿಕೆಗಳನ್ನು ದಾಟಿ ಪ್ರೀತಿಸುವಂತಹವರು ಹಾಗೂ ಲೈಂಗಿಕ ಕ್ರಿಯೆಯಲ್ಲಿ ತೊಡಗುವಂತಹವರಾಗಿದ್ದಾರೆ. ಆದ್ದರಿಂದ ಅನಿವಾರ್ಯವಾಗಿ ಈ ಮೇಲಿನ ಅಂಶಗಳನ್ನು ದಾಟಿ, ಮಾನವೀಯ ಸಂಬಂಧಗಳಿಗೆ ತುಡಿಯುವಂತಹ ಸ್ಥಿತಿಯು ಏರ್ಪಡುತ್ತದೆ ಹಾಗಾಗಿ ಇವರ ಕಥೆಗಳಲ್ಲಿ ದಟ್ಟವಾದ ಜೀವನ ಪ್ರೀತಿ, ತುಂಬು ಲವಲವಿಕೆ ಸದಾ ತುಂಬಿ ತುಳುಕುತ್ತಿರುತ್ತದೆ. ಒಂದು ವಿಶೇಷ ಎಂದರೆ ಇವರ ಬಹುಪಾಲು ಕಥೆಗಳ ನಾಯಕರು ಗ್ರಾಮೀಣ ಪ್ರದೇಶದ ಬಡತನದ ಹಿನ್ನೆಲೆಯಿಂದ ಬಂದ ಶೂದ್ರರು; ಆದರೆ ಜಾಣರು, ಕಿರಿಯ ವಯಸ್ಸಿನಲ್ಲೇ ತಮ್ಮ ಪ್ರತಿಭಾಶಕ್ತಿಯಿಂದ ಸಾಹಿತ್ಯಕವಾದ ಸಾಧನೆಯನ್ನು ಮಾಡಿದವರು, ಸಮಾಜವಾದದಿಂದ ಪ್ರಭಾವಿತರಾದವರು, ಇವರ ಧೈರ್ಯ, ಸಾಹಸಗಳಿಗೆ ಬ್ರಾಹ್ಮಣ ತರುಣಿಯರು ಮಾರುಹೋಗುವಂತಹ ಕಥಾನಾಯಕಿಯರಾಗಿದ್ದಾರೆ. ವಿದ್ಯಾವಂತರೂ, ಬುದ್ಧಿವಂತೆಯರೂ, ಜಾಣೆಯರೂ, ವಿಶಾಲ ಮನೋಧರ್ಮದವರೂ ಆದ ಇವರು ಬದುಕಿನ ಉತ್ಕರ್ಷತೆಯಿಂದ, ಕಥಾನಾಯಕನ ಪ್ರಭಾವದಿಂದ, ವೈಚಾರಿಕತೆಯನ್ನು ರೂಢಿಸಿಕೊಳ್ಳಲು ಯತ್ನಿಸುವವರು.

ಇನ್ನು ಕೆಲವು ಕಥೆಗಳು ಯೌವ್ವನದ ಬದುಕಿನ ಸುತ್ತಮುತ್ತವೇ ಹೆಣೆದುಕೊಂಡಿದ್ದು ಲೈಂಗಿಕ ಸಂಬಂಧದ ಒಳಸೂಕ್ಷ್ಮ ವಿವರಗಳು ಸಂಕೀರ್ಣತೆಗಳನ್ನು ಪರಿಚಯಿಸಿಕೊಡುವಂತಹವಾಗಿದ್ದು ಓದುಗರಿಗೆ ಖುಷಿಯನ್ನು ಸಹ ಕೊಟ್ಟು ರಂಜಿಸುವಂತಹವಾಗಿವೆ. ಓದುವಾಗ ಖುಷಿಯನ್ನು ಕೊಟ್ಟಂತೆ ನಂತರ ಬದುಕಿಗೆ ಹೆಚ್ಚು ಯೋಚನೆಗೆ ಹಚ್ಚುವ ಕಥೆಗಳು ಕೂಡ ಸಾಕಷ್ಟಿವೆ.

'ತಪ್ತ' ಕಥೆಯಲ್ಲಿ ಕಥೆಯ ನಾಯಕನು ಪ್ರಭಾ ಎಂಬ ಹುಡುಗಿಯನ್ನು ಪ್ರೀತಿಸಿ, ಮದುವೆಯಾಗುವುದಾಗಿ ಮಾತುಕೊಟ್ಟಿದ್ದಾನೆ. ಆದರೆ ತನ್ನ ಅಕ್ಕಳ ಮಗಳು ಗೌರಿಯನ್ನು ಮದುವೆಯಾಗಬೇಕೆಂದು ಅವನ ತಾಯಿ ಹಠ ಮಾಡಿ ಹಾಸಿಗೆ ಹಿಡಿಯುತ್ತಾಳೆ. ಇಲ್ಲಿ ನಾಯಕ ಇಷ್ಟೆಲ್ಲ ಓದಿ ನನ್ನ ಮನೋಧರ್ಮಕ್ಕೆ ವಿರುದ್ಧ ಎನಿಸುವ ನಂಬಿಕೆಗೆ ಶರಣಾಗಲಾರೆ ಎಂಬ ದ್ವಂದ್ವಕ್ಕೆ ಒಳಗಾಗಿ, ರೂಢಿಜಾಡ್ಯದಿಂದ ಮುಕ್ತನಾಗಿ ತಾನೇ ತಾನಾಗಿ ಬದುಕ ಹೊರಟ ಅವನ

ನೈತಿಕ ನಿರ್ಧಾರ ಕುಸಿಯುತ್ತದೆ. ಈ ಸಂಕುಚಿತದೊಳಗೆ ಇದ್ದು ತನ್ನ ವ್ಯಕ್ತಿತ್ವಕ್ಕೆ ಧಕ್ಕೆ ತಂದುಕೊಳ್ಳಬಾರದೆಂದು ಆತ್ಮ ವಿಮರ್ಶೆ ಮಾಡಿಕೊಳ್ಳುತ್ತಾನೆ. ಇಲ್ಲಿ ಸಂಪೂರ್ಣವಾಗಿ ವೈಚಾರಿಕನೂ ಅಲ್ಲದ ಅಥವಾ ಕರುಳಬಳ್ಳಿಯ ಸಂಬಂಧವನ್ನು ಕಳಚಿಕೊಳ್ಳಲೂ ಸಾಧ್ಯವಿಲ್ಲದ ಅಸಹಾಯಕನಾಗಿ ನರಳುತ್ತಾನೆ. ಇಲ್ಲಿ ನಾಯಕ ಪರಿಸ್ಥಿತಿಯ ಕೈಗೊಂಬೆಯಾಗಿ ಯಾವ ನಿರ್ಧಾರವನ್ನು ತೆಗೆದುಕೊಳ್ಳಲಾಗದ ಇಕ್ಕಟ್ಟಿನ ಸ್ಥಿತಿಯಲ್ಲಿದ್ದಾನೆ.

'ತೊರೆ' ಕಥೆಯಲ್ಲಿ ಲಕ್ಷ್ಮಿ-ಪ್ರಭು ಬಾಲ್ಯದಿಂದಲೂ ಒಟ್ಟಿಗೆ ಬೆಳೆದು, ದೊಡ್ಡವರಾದ ಮೇಲೂ ಪರಸ್ಪರ ಪ್ರೀತಿಸುತ್ತಾರೆ. ಆದರೆ ಅದನ್ನು ವ್ಯಕ್ತಪಡಿಸಲಾರದಂತಹ ಅಸಹಾಯಕ ಸ್ಥಿತಿಯಲ್ಲಿರುತ್ತಾರೆ. ಹಿರಿಯರ ಅರ್ಥವಿಲ್ಲದ ಪ್ರತಿಷ್ಠೆ, ಅಂತಸ್ತು, ಐಶ್ವರ್ಯ, ದ್ವೇಷ, ಅಸೂಯೆಗಳ ಪರಿಣಾಮವಾಗಿ ಈ ಸಂಬಂಧ ಕಡಿದುಬಿದ್ದು ಜೀವನವಿಡೀ ಪರಿತಪಿಸುವ ವಿಷಾದವಿದೆ. 'ತಪ್ತ' ಕಥೆಯಲ್ಲಿ ಕರುಳಬಳ್ಳಿಯ ಸೆಳೆತದಿಂದ ಬಿಡಿಸಿಕೊಂಡು ಪ್ರೀತಿಸಿದವಳನ್ನು ಸೇರಲಾರದ ವಿಷಾದ ಕಂಡುಬಂದರೆ 'ತೊರೆ' ಕಥೆಯಲ್ಲಿ ಪರಸ್ಪರ ಪ್ರೀತಿಸಿಯೂ ಆತನ ಸಂಬಂಧ ಕಡಿದುಹೋಗಿ ಪರಿತಪಿಸುವಂತಾಗುತ್ತದೆ. ಲಕ್ಷ್ಮಿಯು ಹಿರಿಯರ ಅಪೇಕ್ಷೆಯಂತೆ ಶಕ್ತನಲ್ಲದವನನ್ನು ಕಟ್ಟಿಕೊಂಡು ಕೊನೆಗೂ ವಿಧವೆಯಾಗಿ, ತನ್ನ ಯೌವ್ವನದ ಬದುಕನ್ನೇ ಮರುಟಿಕೊಂಡು ಹಿಂಸೆ ಹಾಗೂ ಕ್ರೂರ ಯಾತನೆಯನ್ನು ಅನುಭವಿಸುತ್ತಾಳೆ. ಪ್ರಭು ಕೂಡ ಅಣ್ಣನ ಅರ್ಥವಿಲ್ಲದ ಪ್ರತಿಷ್ಠೆ ಹಾಗೂ ಆಜ್ಞೆಯಂತೆ ತನಗಿಷ್ಟವಿಲ್ಲದಿದ್ದರೂ ಶ್ರೀಮಂತರ ಮನೆಯವಳಾದ ತಾರಾಳನ್ನು ಮದುವೆಯಾಗಿ ಜೀವನವಿಡೀ ಲಕ್ಷ್ಮಿಗಾಗಿ ಕೊರಗುತ್ತಲೇ ನರಕವನ್ನು ಅನುಭವಿಸುತ್ತಾನೆ. ಈ ಕಥೆಯಲ್ಲಿ ಲೇಖಕರು ಪ್ರೀತಿ, ಪ್ರೇಮದಂತಹ ವಿಚಾರಗಳು ತೀರ ಖಾಸಗಿಯಾದವುಗಳು ಎಂಬುದನ್ನು ಅರಿಯದಂತಹ ಉಳಿಗಮಾನ್ಯ ವ್ಯವಸ್ಥೆಯ ಬಗ್ಗೆ ವಿಷಾಧಿಸುತ್ತಾರೆ. ಜೊತೆಗೆ ಮಾನವೀಯವಾದ ಬದುಕಿಗೆ ಅರ್ಥವಿಲ್ಲದ ಅಂತಸ್ತು, ಪ್ರತಿಷ್ಠೆ, ಐಶ್ವರ್ಯ ಮುಖ್ಯವಲ್ಲ. ಅದಕ್ಕಿಂತ ಪರಸ್ಪರ ಗೌರವ, ಅಂತಃಕರಣ ಅತ್ಯಂತ ಮುಖ್ಯವಾದವು ಎಂಬುದನ್ನು ಈ ಕಥೆಯ ಮೂಲಕ ತಿಳಿದುಕೊಳ್ಳಬಹುದು. ಇಲ್ಲಿ ಲಕ್ಷ್ಮಿಯ ಯೌವ್ವನ ವ್ಯವಸ್ಥೆಯ ಶೋಷಣೆಗೆ ಬಲಿಯಾಗಿರುವುದು ವಿಷಾದವೆನಿಸುತ್ತದೆ. ಅವಳು ನೋವು, ಹಿಂಸೆ, ಆಸೆ, ನಿರಾಸೆ, ತುಮುಲಗಳಿಂದ ಬೇಯುತ್ತಾಳೆ. ಅವಳು ಪ್ರಭುವಿನ ಬಗೆಗೆ ಅಂತರಾಳದಲ್ಲಿ ಪ್ರೀತಿ ಇಟ್ಟುಕೊಂಡಿದ್ದರೂ ಹಾಗೆ ಯೋಚನೆ ಮಾಡಬಾರದೆಂಬ ಪಾಪಪ್ರಜ್ಞೆ ಅವಳನ್ನು ಕಾಡುತ್ತದೆ. ಇಲ್ಲಿ ಕಾಮದ ಸೆಳೆತವಿದೆ. ಲಕ್ಷ್ಮಿ ಮತ್ತು ಪ್ರಭು ಸಮಾಜದಲ್ಲಿನ ಡಾಂಬಿಕ ವ್ಯವಸ್ಥೆಯ ಕ್ರೌರ್ಯಾವಸ್ಥೆಗೆ ಬಲಿಯಾಗಿದ್ದಾರೆ.

ಸಂಬಂಧ ಕಥೆಯು ಈ ಸಂಕಲನದಲ್ಲೇ ವಿಶಿಷ್ಟವಾಗುಳಿಯುವ ಉತ್ತಮ ಕಥೆಯಾಗಿದೆ. ಮನುಷ್ಯನು ಮಾನವೀಯವಾಗಿ ನಡೆದುಕೊಳ್ಳದಿದ್ದುದರ ಪರಿಣಾಮವಾಗಿ ಉಂಟಾಗುವ ದುರಂತ ಬದುಕಿನ ಸುತ್ತಮುತ್ತ ಹೆಣೆದುಕೊಂಡಿರುವ ಈ ಕಥೆ ವಿಷಾದಭಾವವನ್ನು ಪ್ರಕಟಿಸುತ್ತದೆ. ಈ ಕಥೆಯಲ್ಲಿ ನಾಯಕ ತನ್ನ ಬಾಲ್ಯ ಸಂಗಾತಿಯಾಗಿದ್ದ ಬ್ರಾಹ್ಮಣ ಲಲಿತಳ ಬದುಕಿನ ದುರಂತವನ್ನು ಅಸಹಾಯಕವಾಗಿ ನೋಡುತ್ತಲೇ ಮಾನಸಿಕ ಯಾತನೆಗೆ ಗುರಿಯಾಗುತ್ತಾನೆ. ನಾಯಕನು ಓದುತ್ತಿರುವಾಗಲೇ ಇವನ ಬಾಲ್ಯದ ಗೆಳತಿ ಮದುವೆಯಾಗಿ ಪಶುವಿನ ರೀತಿಯ ಗಂಡನ ಎಲ್ಲ ದೌರ್ಜನ್ಯಗಳನ್ನು ತಾಳಿಕೊಳ್ಳುತ್ತ ಬದುಕಿನಲ್ಲಿ ನಗ್ಗಿ ನಲುಗಿ ಹೋಗಿದ್ದಾಳೆ. 'ಬಾಲ್ಯದಲ್ಲಿ ತೆಳ್ಳಗೆ ಗೊಂಬೆಯಂತಿದ್ದ ಗೆಳತಿ ಇವಳೆಯೇ?' ಎಂದು ಅನುಮಾನ ಹುಟ್ಟುವ ಮಟ್ಟಿಗೆ ಅವಳ ಬದುಕು ಬಾಡಿಹೋಗಿದೆ. ನಾಯಿ ಕಚ್ಚಿದ ಅವಳ ಮಗಳ ಗಾಯ ಇಲ್ಲಿ ವಾಸಿಯಾಗದೆಮದು ತಿಳಿದು ಇವಳ ಬಗೆಗೆ ಕಾಳಜಿ ವಹಿಸಿ ಪರಿಚಯಸ್ಥ ಡಾಕ್ಟರೊಬ್ಬರಿಂದ ಪತ್ರವನ್ನು ಕೊಡಿಸಿ ಹಣದ ಸಹಾಯವನ್ನು ಮಾಡುತ್ತಾನೆ. ಇದು ಅವನ ಮಾನವೀಯ ಗುಣವನ್ನು ಎತ್ತಿ ತೋರಿಸುತ್ತದೆ. ಆದರೆ ಈತನ ಸಹಾಯವನ್ನು ತಪ್ಪಾಗಿ ತಿಳಿದುಕೊಂಡು ಅಬಲಳಾದ ಲಲಿತಳನ್ನು ಅವಳ ಗಂಡ ಹೊಡೆದು ಹಿಂಸಿಸುತ್ತಾನೆ. ಮಗುವನ್ನು ಆಸ್ಪತ್ರೆಗೆ ಕರೆದುಕೊಂಡು ಹೋಗದ ಕಾರಣ ಮಗು ಸಾಯುತ್ತದೆ. "ಅವಳ ಕಣ್ಣಲ್ಲಿ ಸ್ವಲ್ಪವೂ ಬೆಳಕಿರಲಿಲ್ಲ........ 'ನಿನಗೆ ಅನ್ಯಾಯ ಮಾಡಿದೆ ಲಲಿತ ಅಂದೆ' ಲಲಿತ ನಿತ್ರಾಣ ದನಿಯಲ್ಲಿ ಇಲ್ಲ ಎಂದು ಕತ್ತು ಅಲ್ಲಾಡಿಸಿದಳು. ಕಣ್ಣು ಆಳಕ್ಕಿಳಿದಿದ್ದರೂ, ನೀರುಕ್ಕುತ್ತಿತ್ತು. ಲಲಿತ ಎದ್ದು ಕೂರಲು ಪ್ರಯತ್ನಿಸಿದಳು. ಬೇಡ ಹಾಗೆ ಮಲಗು ಲಲಿತ ಎಂದೆ".[7] ಮಾನವನಲ್ಲಿ ಅಡಗಿರುವ ಸಣ್ಣತನಗಳ ಸೂಕ್ಷ್ಮ ವಿವರಗಳು ಮತ್ತು ಮಾನವ ಸಂಬಂಧಗಳು ತರುವ ನೋವಿನ ಚಿತ್ರಣ ಸಹಜವಾಗಿ ಈ ಪಾತ್ರಗಳ ಮೂಲಕ ವ್ಯಕ್ತವಾಗಿರುವುದನ್ನು ಕಾಣಬಹುದು.

"ಆಗಂತುಕ" ಬದುಕನ್ನು ಬಾಲಕನ ಮುಗ್ಧ ದೃಷ್ಟಿಕೋನದಲ್ಲಿ ನೋಡಿರುವ ಈ ಕಥೆಯು ಸಾವಿನ ಸುತ್ತಮುತ್ತಲಿನ ವಿವರಗಳ ನಡುವೆ ಕಥೆಯು ಹರಡಿಕೊಂಡಿದೆ. ಮುಗ್ಧ ಬಾಲಕನ ಸಾಕ್ಷೀ ಪ್ರಜ್ಞೆಯಲ್ಲಿ ಇಡೀ ಕಥೆ ನಡೆಯುತ್ತದೆ. ಈ ಕಥೆಯ ಮೂಲ ಸತ್ವದ ಬಗೆಗೆ ಅನಂತಮೂರ್ತಿಯವರು "ಕಥೆಯ ಕ್ಷುಬ್ದ ವಾತಾವರಣದ ದಟ್ಟತೆಗೆ ನಿಸರ್ಗ ಎಷ್ಟು ಕಾರಣವೋ ಅಷ್ಟೇ ಮನುಷ್ಯ ಲೋಕದ ವ್ಯಗ್ರತೆಗಳು ಕಾರಣವಾಗಿದೆ. ಕಿಟ್ಟಿ ಪ್ರೀತಿಸುವ ತಾಯಿ ಅಜ್ಜಿಯರು ಪರಸ್ಪರ ಬಡಿದಾಡುತ್ತಾರೆ. ತಂದೆ ತಾಯಿಯನ್ನು ಹೊಡೆಯುತ್ತಾನೆ. ತಾಯಿ ದುಗುಡದಲ್ಲಿ ಸಾವಿನ ಬಗ್ಗೆ ಮಾತಾಡುತ್ತಾಳೆ. ತುಂಬಿದ ಅನುಭವದ ಅಜ್ಜಿ ವಿಷಾದದಿಂದ

ಸಾವಿನ ಅನಿವಾರ್ಯತೆಯನ್ನು ಕುರಿತು ಹೇಳುತ್ತಾರೆ. ಅವರು ಒಳ್ಳೆಯವರಿದ್ದರೂ ಅವರ ಹೆಂಡತಿ ಬೇವಿನ ಹಟ್ಟಿ ಕಾಳವ್ವನಂತವಳು. ಅವರು ಮುದ್ದಿನಿಂದ ಸಾಕಿದ ಒಬ್ಬಳೇ ಮಗಳು ದಾರಿ ತಪ್ಪಿದವಳು. ತಂದೆ ಸಾಯುತ್ತಿದ್ದಾಗಲೂ ಬಂದು ಅವರ ಮುಖ ನೋಡದವಳು. ಪ್ರೇಮ, ಕ್ರೌರ್ಯ, ಹಿಂಸೆ, ಭಯ, ರೋಗ, ಯಾತನೆ ಎಲ್ಲವೂ ಈ ಕಥೆಯ ಲೋಕದ ಸಂಕೀರ್ಣ ಅಂಶಗಳು. ಮಗುವಿನ ಮುಗ್ಧ ಮನಸ್ಸಿನ ಮೇಲೆ ಮೌನವಾಗಿ ಪರಿಣಾಮ ಮಾಡುತ್ತಿರುವ ಸಂಗತಿಗಳು. ಕಿಟ್ಟಿ ಎಲ್ಲದಕ್ಕೂ ಸಾಕ್ಷಿಯಾಗಿ ಮಗುವಿಗೆ ಸಹಜವಾದ ನಿರ್ಲಿಪ್ತತೆ ಆಸಕ್ತಿಗಳಿಂದ ಇವುಗಳನ್ನೆಲ್ಲ ನೋಡುತ್ತಾನೆ. ಈ ಕಥೆಯ ತುಂಬ ದಟ್ಟವಾದ ವಿವರಗಳು ಬರುತ್ತವೆ. ಮೃತ್ಯು ಪ್ರಜ್ಞೆಯನ್ನು ಗಾಢವಾಗಿಸುತ್ತ ಹೋಗುವ ವಿವರಗಳ ಜೊತೆಗೆ ಕಿಟ್ಟಿ ಸ್ಕೂಲಿನಲ್ಲಿ ಕೂತು ಕಾಲುಗಳಿಗೆ ಅಂಟಿಕೊಂಡಿದ್ದ ಕೆಸರು ಚಕ್ಕೆಗಳನ್ನು ಬಿಡುಸುವುದರಲ್ಲೇ ಮಗ್ನನಾದ ವಿವರಕ್ಕೂ ಈ ಕಥೆಯಲ್ಲಿ ಎಡೆಯಿದೆ. ಸಾಯುತ್ತ ಮಲಗಿರುವ ಮಾವಯ್ಯನ ಪಾದಗಳು ಮೀನಿನ ಹೊಟ್ಟೆಯಂತೆ ಬಿಳಿಚಿಕೊಂಡಿರುವ ವಿವರ, ಸಂಜೆಗತ್ತಲಿನಲ್ಲಿ ಗುಳವನ್ನು ಕೆಂಪಗೆ ಕಾಯಿಸುತ್ತಿರುವ ಆಚಾರಿಯ ಕುಲುಮೆ, ಗಾಢವಾದ ರೀತಿಯಲ್ಲಿ ಸಾವಿನ ಅಳುಕನ್ನು ಬೆಳೆಸುವ ಮಳೆ, ಬೊಬ್ಬರಿಸಿ ಮಾಡುವ ಯಮನ ವರ್ಣನೆ, ಕಜ್ಜಿ ಕೆರೆಯುತ್ತ ಬೆಂಕಿಯ ಎದುರು ಕೂತ ಈ ಅನಾಥಪ್ರಜ್ಞೆಯ ಬೇವರ್ಸಿಯ ಚಿತ್ರ– ಈ ಎಲ್ಲವೂ ಕುಡಿ ಸಾಂಕೇತಿಕವೂ, ಸ್ನಿಗ್ಧವೂ ಆದ ಒಂದು ಪ್ರಪಂಚವನ್ನು ಸೃಷ್ಟಿಸುತ್ತವೆ"[3] ಎಂದು ಹೇಳಿರುವ ಅಭಿಪ್ರಾಯಗಳು ಅತ್ಯಂತ ಸಮರ್ಥನೀಯವಾಗಿರುವುದರಿಂದ ಕಥೆಯನ್ನು ಆ ದೃಷ್ಟಿಯಿಂದಲೇ ನೋಡಬೇಕಾಗುತ್ತದೆ. ಕಥೆಯಲ್ಲಿ ಬರುವ ಸಾವು, ದುಗುಡ, ಅಳು, ದುಃಖ, ಪ್ರೇಮ, ಭಯ, ಹಿಂಸೆ, ಯಾತನೆ, ಕ್ರೌರ್ಯ ಮುಂತಾದವುಗಳನ್ನು ಎಳೆಯ ಆದರೆ ಸಂವೇದನಾಶೀಲನಾದ ಕಿಟ್ಟಿಯ ಮುಖಾಂತರ ಕಟ್ಟಿಕೊಡುವ ರೀತಿ ಅದ್ಭುತವಾಗಿದೆ.

'ನೆಲಗುಮ್ಮ' ಕಥೆಯ ನಾಯಕ ಪ್ರಬುದ್ಧನಾದವನು. ಈ ಕಥೆಯಲ್ಲಿ 'ತಪ್ತ' ದಂತೆಯೇ ಅಕ್ಕನ ಮಗಳನ್ನು ಮದುವೆಯಾಗುವಂತೆ ಹಿರಿಯರ ಒತ್ತಾಯವಿದೆ. ಈ ಕಥೆಯ ನಾಯಕ 'ತಪ್ತ' ಕಥೆಯ ನಾಯಕನಂತೆ ಸ್ವಲ್ಪ ಮಟ್ಟಿಗೆ ತೊಳಲಾಡುತ್ತಾನೆ. ಆದರೂ ಭೂತದಿಂದ ಬಿಡಿಸಿಕೊಳ್ಳುವ ಹೋರಾಟ ಮಾಡುತ್ತಾನೆ. ಹಳೆಯ ಸಂಬಂಧದ ಸೆಳೆತ, ಯೌವ್ವನದ ಉತ್ಕರ್ಷ, ಹೊಸ ವಿಚಾರಗಳ ತುಡಿತ – ಇವುಗಳು ಇವರ ಬಹುಪಾಲು ಕಥೆಗಳಲ್ಲಿ ಬರುತ್ತವೆ. ಕಥಾನಾಯಕ ಬೇರೆ ಜಾತಿಯವಳನ್ನು ಮದುವೆಯಾಗುವ ವಿಷಯ ಅಜ್ಜಿಗೆ ತಿಳಿದು ಕಳೆದ ಸಲ ಊರಿಗೆ ಹೋಗಿದ್ದಾಗ "ಹಜಾರದ ಮೂಲೆಯಲ್ಲಿ ಕುಕ್ಕರುಗಾಲಿನಲ್ಲಿ

ಕೂತು ಕವಳ ಕುಟ್ಟುತ್ತ ತನ್ನ ಮೊಮ್ಮಗಳನ್ನು –ಅದೂ ತಾನೇ ಎತ್ತಿ ಆಡಿಸಿದ್ದವಳನ್ನು ಕಟ್ಟಿಕೊಳ್ಳದೇ ಯಾವಳೋ ಕುಲಗೆಟ್ಟವಳ್ನ ಕಟ್ಕೋತಿನಿ ಅಂತ ನಮ್ಮನೆ ದೇವ್ರು ದಿಂಡರ್ನೆಲ್ಲ ದೂರ ಮಾಡ್ತಿಯಲ್ಲ, ಮನೆಹಾಳ"[೩] ಎಂದು ಬೈಸಿಕೊಂಡಿದ್ದ. ಇಲ್ಲಿ ಕಥಾನಾಯಕ ಖಾಸಾ ಸಂಬಂಧವನ್ನು ಮೀರಿ ವೈಚಾರಿಕ ನಿಲುವನ್ನೆ ಎತ್ತಿ ಹಿಡಿಯುತ್ತಾನೆ.



'ಸೀಮಂತ, ಹುತ್ತ, ಶ್ರಾವಣ'–ಈ ಮೂರು ಕಥೆಗಳು ಲೈಂಗಿಕತೆಯನ್ನು ಪ್ರಧಾನ ವಸ್ತುವನ್ನಾಗಿಸಿಕೊಂಡು, ಅದರ ವಿವಿದ ಮಗ್ಗಲುಗಳನ್ನು, ಒಳವಿವರಗಳನ್ನು ಪರಿಚಯಿಸುತ್ತವೆ. 'ಸೀಮಂತ' ಎಂದರೆ ಚೊಚ್ಚಲು ಬಸುರಿಗೆ ಮಾಡುವ ಸಂಸ್ಕಾರಗಳಲ್ಲಿ ಒಂದು. ಇಲ್ಲಿ ಪ್ರೀತಿಸಿ ಮದುವೆಯಾದ ಗಂಡನಿಂದ ತೃಪ್ತಿಯನ್ನು ಪಡೆಯಲಾಗದೆ, ಆತನ ಶಿಷ್ಯನಿಂದ ಗರ್ಭಧರಿಸುವ ಸ್ಥಿತಿಯಿದ್ದು, ಕೊನೆಗೆ ಆ ಪಾಪಪ್ರಜ್ಞೆ ಇವಳನ್ನು ಕಾಡುವುದೇ ಕಥೆಯ ಪ್ರಧಾನ ಕ್ರಿಯೆಯಾಗಿದೆ. ಇಲ್ಲಿ ಲೇಖಕರು ಲೈಂಗಿಕ ಸಂಬಂಧದಲ್ಲಡಗಿರುವ ಮಡಿವಂತಿಕೆ, ಸಂಕೋಚ, ಸಭ್ಯತೆ, ಮುಂತಾದವುಗಳನ್ನು ವಾಸ್ತವದ ನೆಲೆಗಟ್ಟಿನಲ್ಲಿ ನೋಡಿ ಅದರ ಸಂಕೀರ್ಣತೆಯನ್ನು ಚಿತ್ರಿಸಿದ್ದಾರೆ. ಸಾಹಿತ್ಯದ ಅಧ್ಯಾಪಕನಾದ ನರಹರಿ ಹೃದಯವಂತ. ಹೆಂಡತಿಗೆ ಲೈಂಗಿಕ ತೃಪ್ತಿಯನ್ನು ಕೊಡಲಾಗದ ತನ್ನ ಅಸಮರ್ಥತೆಯನ್ನು ಅರ್ಥಮಾಡಿಕೊಂಡು 'ನಿನಗೆ ಅನ್ಯಾಯ ಮಾಡಿದೆ' ಎಂದು ಕೊರಗುತ್ತಾನೆ. ಈ ಸಲುವಾಗಿ ತನ್ನ ಶಿಷ್ಯ ಶ್ರೀಧರನನ್ನು ತನ್ನ ಹೆಂಡತಿಗೆ ಪರಿಚಯಿಸುವ ಇವನು, ಇವರಿಬ್ಬರೂ ಒಟ್ಟಾಗಿ ಸಿನಿಮಾಕ್ಕೆ ಹೋಗಲು ಸಮ್ಮತಿಸುತ್ತಾನೆ. ಶ್ರೀಧರನಿಂದ ತನ್ನ ಹೆಂಡತಿ ಗರ್ಭಧರಿಸುವ ವಿಷಯ ಗೊತ್ತಾದರೂ ಗೊಂದಲಕ್ಕೆ ಒಳಗಾಗುವುದಿಲ್ಲ. ಲೇಖಕರು ನರಹರಿಯ ನಿರ್ವೀರ್ಯ ಸ್ಥಿತಿಯನ್ನು ಗುರುತಿಸುವುದರ ಜೊತೆಗೆ ಆತನಲ್ಲಿರುವ ಹೃದಯವಂತಿಕೆಯನ್ನು ಪರಿಚಯಿಸುತ್ತಾರೆ. ಆದರೆ ನಂತರ ಪದ್ಮಾಳ 'ಪಾಪ ಪ್ರಜ್ಞೆ'ಯನ್ನು ತೀವ್ರವಾಗಿ ತರಲು ಯತ್ನಿಸುತ್ತಾರೆ. ಅದು ಎಷ್ಟರಮಟ್ಟಿಗೆ ಬರುತ್ತದೆ ಎಂದರೆ, ಅವಳು ತಾನು ಮಾಡಿದ್ದು ಪರಮ ಪಾಪ ಎಂದು ಭಾವಿಸುತ್ತಾಳೆ. ತನ್ನ ಒಳನೋವು, ಹಿಂಸೆಯನ್ನು ಹೇಳಲಾರದೆ ಹೇಳದಿರಲಾರದೆ ಒದ್ದಾಡುತ್ತಾಳೆ. ಕೊನೆಗೆ ಇನ್ನೊಬ್ಬರಿಗೆ ಹೇಳಿದರೆ ಹೃದಯ ಹಗುರವಾದೀತು ಎಂದು ಅನ್ನಿಸಿದರೂ ಗಂಡನ ಹೃದಯವಂತಿಕೆ ನೆನಪಿಗೆ ಬಂದು ಅದುಮಿಟ್ಟುಕೊಳ್ಳುತ್ತಾಳೆ.

'ಶ್ರಾವಣ' ಕಥೆಯು ಪ್ರೇಮ, ವಿರಹಗಳ ಸಾಫಲ್ಯ ಮತ್ತು ವೈಫಲ್ಯಗಳ ಸುತ್ತಮುತ್ತ ಹರಡಿಕೊಂಡಿದೆ. ದಟ್ಟವಾದ ಜೀವನ ಪ್ರೀತಿಯ ಸೆಳೆತವಿರುವ ಈ ಕತೆಯಲ್ಲಿ ಬದುಕಿನಲ್ಲಿ ಏನೇ

ತೊಡಕು, ಬಿಕ್ಕಟ್ಟು, ವೈಪಲ್ಯಗಳಿದ್ದರೂ ಅವುಗಳೆಲ್ಲವನ್ನು ಮೀರಿ ಜೀವನ ಶ್ರೇಷ್ಠವಾದುದು ಎಂಬ ಆಶಯ ಕಥೆಯಲ್ಲಿ ಧ್ವನಿತವಾಗುತ್ತದೆ. ಶಕುಂತಳೆ, ಸವಿತಾ ಗುರುಶಿಷ್ಯೆಯರು. ಶಕುಂತಳೆ ಈಗಾಗಲೇ ಒಂದು ಪ್ರಣಯ ವೈಫಲ್ಯದಿಂದ ಬೆಂದು ಬೂದಿಯಾಗಿದ್ದಾಳೆ. ಶಕುಂತಳೆಗೆ ಭೂತವಾದದ್ದು ಇಲ್ಲಿ ಸವಿತಾಳಿಗೆ ವರ್ತಮಾನವಾಗಿದೆ. ಶಕುಂತಳೆ ಪ್ರಣಯ ವೈಫಲ್ಯದಿಂದ ನೊಂದು ಈಗ ಯಾಂತ್ರಿಕವಾಗಿ ಬದುಕುತ್ತಿದ್ದಾಳೆ. "ತನ್ನಿಂದಾಗಿ ತಂಗಿಯರಿಗೂ ಮದುವೆಯಿಲ್ಲ. ಸುಖವಿಲ್ಲ. ಅಣ್ಣನಿಗೂ ಮದುವೆಯಿಲ್ಲ. ತನ್ನ ಮನಸ್ಸಿಗೂ ಶಾಂತಿಯಿಲ್ಲ, ಯಾಕಾದರೂ ಬದುಕಿರಬೇಕು, ದಿನಬೆಳಗಾದರೆ ಊಟ, ನಿದ್ದೆ, ಕನಸು, ಓದು, ಪಾಠ, ಪ್ರವಚನ, ಕಾಫಿ, ಸ್ನೋ, ಗೀತೆ, ಆಧ್ಯಾತ್ಮ, ಚಪ್ಪಲಿ, ಕುಪ್ಪಸ, ಕೀಟ್ಸ್, ಶೆಲ್ಲಿ...... ಇವೇ ಯಾಂತ್ರಿಕ ಬದುಕಿನ ಉಪಕರಣಗಳು. ಹಾಗೆ ನೋಡಿದರೆ ಇದು ಬದುಕೆ ಅಲ್ಲ ಅನ್ನಿಸುತ್ತದೆ".[8] ಇಲ್ಲಿ ಮೇಲಿನ ಎಲ್ಲವೂ ಕೃತಕವೆನಿಸುತ್ತದೆ. ಪ್ರೀತಿಸುವ ಜೀವವೊಂದಿದ್ದರೆ ಜೀವನ ಅರ್ಥಪೂರ್ಣವಾಗುತ್ತದೆ ಎಂಬುದನ್ನು ಶಕುಂತಳೆ ವ್ಯಕ್ತಪಡಿಸುವುದು ಮಹತ್ವವೆನಿಸುತ್ತದೆ. ಆದ್ದರಿಂದಲೇ ಸವಿತಾ ತನ್ನ ಪ್ರಿಯತಮ ಹೇಳಿದ ಮದುವೆ ಅನ್ನುವುದು ಒಂದು ಬಂಧನ, ಸ್ವಲ್ಪ ದಿನ ಹಾಯಾಗಿರೋಣ ಎಂದು ಹೇಳಿದ್ದನ್ನು ಆತಂಕದಲ್ಲಿ ಕೇಳಿದಾಗ ಈ ಎಲ್ಲ ಸುಳ್ಳು ಭರವಸೆಗಳಿಂದ ಬೆಂದು ವಿಫಲಳಾಗಿದ್ದ ಶಕುಂತಳ ತಾನು ಅರ್ಥವಿಲ್ಲದ ಪೊಳ್ಳು ಭರವಸೆಗಳನ್ನು ನಂಬಿ ಅನುಭವಿಸುತ್ತಿರುವ ಯಾತನೆ ತನ್ನ ಶಿಷ್ಯೆಗೆ ಆಗಬಾರದೆಂಬ ಆಶಯದಿಂದ ಆ ರೀತಿಯ ಭರವಸೆಯನ್ನಷ್ಟೆ ನಂಬಿಕೊಳ್ಳಬೇಡ. ಅವುಗಳಷ್ಟೇ ಸತ್ಯ ಅಲ್ಲ. ಆದ್ದರಿಂದ ಬೇಗ ಮದುವೆಯಾಗುವುದೇ ಒಳಿತು ಎಂಬ ಆಶಯವನ್ನು ವ್ಯಕ್ತಪಡಿಸುತ್ತಾಳೆ. ಇದು ಅವಳ ಜೀವನಾನುಭವದ ಮಟ್ಟಿಗೆ ನಿಜವಾದುದರಿಂದ ತನ್ನ ಅಭಿಪ್ರಾಯವನ್ನು ಹೇಳಿರುವುದು ಸರಿ ಎನಿಸುತ್ತದೆ. ಶಕುಂತಳಾ ಪ್ರಣಯ ವೈಫಲ್ಯದಿಂದ ನೊಂದು, ಏಕಾಂಗಿ ಬದುಕಿನ ಕ್ರೂರ ಯಾತನೆಯನ್ನು ಅನುಭವಿಸಲಾರದೆ, ಹೊಸ ಬದುಕಿಗೆ ಹೊರಳುವುದು ಮಹತ್ವವೆನಿಸುತ್ತದೆ. ಜಾತಿ, ಮತ, ವಯಸ್ಸು, ಅಂತಸ್ತುಗಳ ಮಡಿವಂತಿಕೆಗಳನ್ನು ದಾಟಿ ಬದುಕು ಇರುವುದನ್ನು ಕಂಡುಕೊಂಡದ್ದು ಸಾಫಲ್ಯ ಜೀವನಕ್ಕೆ ಹೊರಳಿದ್ದು ಗಮನಾರ್ಹವಾದುದಾಗಿದೆ.

'ಹುತ್ತ' ತೀರ ಸಾಧಾರಣವಾದ ಕಥೆಯಾಗಿದೆ. ತಾಯಿಯಷ್ಟೇ ವಯಸ್ಸಾದ ವಿಕ್ಷಿಪ್ತ ನಡವಳಿಕೆಯ ಹೆಣ್ಣೊಬ್ಬಳ ಪ್ರೇಮದಿಂದ ತತ್ತರಿಸಿಬಿಡುವ, ವಿಪ್ಪಲಗೊಳ್ಳುವ ಯುವಕನೊಬ್ಬನ ಮನಸ್ಥಿತಿಯನ್ನು ಒಳಗೊಂಡದ್ದಾಗಿದೆ. ಈ ಕಥೆಯಲ್ಲಿ ನಾಯಕನ ಸಹಪಾಠಿ ಸುಮಿತ್ರಾಳು ಶ್ರೀಮಂತಿಕೆಯ ಮನೆಯಿಂದ ಬಂದವಳಾದರೂ ಇವನಿಗೆ ಸ್ಪಂದಿಸುತ್ತಾಳೆ. ಅವಳ ಸರಳತೆ,

ಸಾಯಿತ್ಯಕವಾದ ಆಸಕ್ತಿ, ಬದುಕನ್ನು ಅರ್ಥೈಸುವ ರೀತಿ ಮುಂತಾದವುಗಳಿಂದ ಇಬ್ಬರೂ ಆತ್ಮೀಯರಾಗುತ್ತಾರೆ. ಈ ಎರಡು ಪಾತ್ರಗಳ ಸಂಬಂಧದಲ್ಲಿ ಕಥೆ ಹೀಗೆ ಸಹಜವಾಗಿ ಆತ್ಮೀಯವಾಗಿಯೇ ಪ್ರಾರಂಭವಾಗುತ್ತದೆ. ನಂತರ ಸುಮಿತ್ರಾಳು ಇವನನ್ನು ಮನೆಗೆ ಕರೆದುಕೊಂಡುಹೋಗಿ ಅವಳ ತಾಯಿಗೆ ಪರಿಚಯಿಸುತ್ತಾಳೆ. ಆಗರ್ಭ ಶ್ರೀಮಂತಿಕೆಯಿಂದ ಬಂದ ಸುಮಿತ್ರಾಳ ತಾಯಿ ಗಂಡನ ಜೊತೆ ಹೊಂದಿಕೊಳ್ಳಲಾಗದೆ ನಗರದ ಬದುಕಿಗೆ ಜೋತುಬಿದ್ದು, ಲೈಂಗಿಕ ಅತೃಪ್ತಿಯಿಂದ ವಿಕ್ಷಿಪ್ತ ನಡವಳಿಕೆಯುವಳಾಗಿರುತ್ತಾಳೆ. ಸುಮಿತ್ರಾ ಹಳ್ಳಿಗೆ ಹೋಗುವ ಮುಂಚೆ ತನ್ನ ತಾಯಿ ಒಬ್ಬರೇ ಇರುತ್ತಾರೆ, ಆಗಾಗ್ಗೆ ಬಂದು ನೋಡಿಕೊಂಡುಹೋಗಿ ಎಂದದ್ದರಿಂದ ಮನೆಗೆ ಹೋಗಿ ಬರುತ್ತಿರುತ್ತಾನೆ. ಒಂದು ದಿನ ಸುಮಿತ್ರಾಳ ತಾಯಿಯ ಅಪೇಕ್ಷೆಯಂತೆ ಅವರೊಡನೆ ಸಿನಿಮಾಗೆ ಹೋಗಿ ಬರುತ್ತಾನೆ. ಇವನನ್ನು ರಾತ್ರಿ ಅಲ್ಲೇ ಮಲಗಲು ಹೇಳಿದ ಸುಮಿತ್ರಾಳ ತಾಯಿ ಎಷ್ಟೋ ಕಾಲದಿಂದ ಅತೃಪ್ತಿಯಿಂದ ಬೆಯ್ಯುತ್ತಿದ್ದ ಅವಳು ತನ್ನ ಆ ದಾಹವನ್ನು ತೀರಿಸಿಕೊಳ್ಳಲು ಯತ್ನಿಸುತ್ತಾಳೆ. ಇವನು ಹೆದರಿ ಆಘಾತಕ್ಕೊಳಗಾಗಿ ತತ್ತರಿಸಿ ಓಡಿ ಹೋಗುತ್ತಾನೆ. ಇಲ್ಲಿ ವಯಸ್ಸಾದ ಹೆಂಗಸೊಬ್ಬಳ ವಿಕ್ಷಿಪ್ತ ನಡವಳಿಕೆಗಳನ್ನು, ಅತೃಪ್ತಿಯನ್ನು ಕಾಣಬಹುದಾಗಿದೆ.

'ಫೀನಿಕ್ಸ್' ಎರಡು ಹೆಣ್ಣು ಒಂದು ಗಂಡಿನ ಸಂಕೀರ್ಣ ಸಂಬಂಧವನ್ನು ಅಂದರೆ ತ್ರಿಕೋನ ಪ್ರೇಮವನ್ನು ವಸ್ತುವಾಗುಳ್ಳ ಕಥೆಯಾಗಿದೆ. ಮನಸಾರೆ ಪ್ರೀತಿಸಿದವಳನ್ನು ಬಿಡಲಾಗದ, ಮತ್ತೊಬ್ಬಳನ್ನು ಕಟ್ಟಿಕೊಳ್ಳಲಾಗದ ಇಬ್ಬಂದಿತನದ ತೀವ್ರತೆಯನ್ನು ಅನುಭವಿಸುತ್ತಾನೆ. ಕಥೆಯಲ್ಲಿ ಯಾವುದೇ ಪಾತ್ರದ ಹೆಸರೂ ಕೂಡ ಬರುವುದಿಲ್ಲ. ಬರಹಗಾರನಾದ ಕಥಾನಾಯಕನು ಒಬ್ಬಳನ್ನು ಅತ್ಯಂತ ಗಾಢವಾಗಿ ಪ್ರೀತಿಸುತ್ತಾನೆ. ಅವಳೂ ಕೂಡ ಇವನನ್ನು ಅಷ್ಟೇ ಉತ್ಕಟವಾಗಿ ಪ್ರೀತಿಸುತ್ತಾಳಾದರೂ ಮದುವೆಯಾಗಲು ಒಪ್ಪಲಾರಳು. ಆದರೆ ಇವನು ಮಾತ್ರ ಅವಳನ್ನು ಬಿಟ್ಟು ಇನ್ನಾರೊಡನೆಯೂ ಬದುಕಲು ಸಾಧ್ಯವೇ ಇಲ್ಲವೆಂಬಂತೆ ಪ್ರೀತಿಸುತ್ತಾನೆ. ಅವನ ಆ ಉತ್ಕಟತೆ ಬಯಕೆಯಾಗುತ್ತದೆ. ಬಯಕೆ ಉತ್ಕಟವಾಗುವುದರ ಜೊತೆಗೆ ಆಕ್ರೋಶ.

"ಫಲವತ್ತಾದ ಈ ಭೂಮಿ, ಇನ್ನೊಬ್ಬನ ಸ್ವತ್ತಾಗುವ

ಅವನ ಭಯಕೆಗೆ ಮಣ್ಣಾಗುವ

ಅವನ ಇಚ್ಛೆಗೆ ಉಸಿರಾಗುವ

ಆಸೆಗೆ ತವಕಿಸಿದಾಗೆಲ್ಲ ಆಕ್ರೋಶ, ಆಕ್ರೋಶ, ಆಕ್ರೋಶ"[೫]

ಅವಳು ಬೇರೆಯವನೊಡನೆ ಮದುವೆಯಾದರು ಇವನೊಡನೆ ಪ್ರೇಮವನ್ನಿಟ್ಟುಕೊಳ್ಳುತ್ತಾಳೆ. ಇಲ್ಲಿ ಲೇಖಕರು ಪ್ರೇಮ ಸಂಬಂಧಗಳು ಮದುವೆಯಂತಹ ಬಂಧನಗಳಿಗಿಂತಲೂ ಶ್ರೇಷ್ಠವಾದವುಗಳು ಎಂಬುದನ್ನು ಧ್ವನಿಸುತ್ತಾರೆ.

'ಅಂಟಿದ ನಂಟಿನ ಕೊನೆ ಬಲ್ಲವರಾರು?' ಕಥೆಯಲ್ಲೂ ಕಾಮದ ತೀವ್ರವಾದ ಸೆಳೆತವಿದೆ. ಶೂದ್ರ ನಾಯಕ ಮತ್ತು ಬ್ರಾಹ್ಮಣ ತರುಣಿ ಶಾಲಿನಿಯ ಪ್ರಣಯ ಸಂಬಂಧವನ್ನು ಕಥೆ ಚಿತ್ರಿಸುತ್ತದೆ. ಜಾತಿ ಪ್ರಜ್ಞೆಯನ್ನು ವೈಚಾರಿಕ ನೆಲೆಯಿಂದ ನೋಡಬೇಕೆಂಬ ಹಂಬಲ ಇಲ್ಲಿದೆ. ಬ್ರಾಹ್ಮಣ ದ್ವೇಷಿಯಾದ ನಾಯಕ, ಬ್ರಾಹ್ಮಣ ತರುಣಿಯರನ್ನು ಪ್ರೇತಿಸುವಂತೆ ನಟಿಸಿ, ಮರಳುಮಾಡಿ ಅವರ ಶೀಲವನ್ನು ಹಾಳುಮಾಡುವ ಮೂಲಕ ಬ್ರಾಹ್ಮಣ ಜಾತಿಯ ಮೇಲೆ ತನ್ನ ಸೇಡು ತೀರಿಕೊಳ್ಳುತ್ತಾನೆ. ಆದರೆ ತನ್ನ ಪರಿಚಯದ ಶಾಲಿನಿಯನ್ನು ಹಾಗೆ ನೋಡಲಾರ. ಶಾಲಿನಿ ಇವನ ವ್ಯಕ್ತಿತ್ವಕ್ಕೆ ಮಾರು ಹೋಗಿ, ಪ್ರೀತಿಸಿ ಮದುವೆಯಾಗಲಿಕ್ಕೆ ತಯಾರಿದ್ದರೂ ಇವನು ಮದುವೆಯಾಗುವುದಿಲ್ಲ. ಇವನಿಗೆ ಪ್ರೀತಿಗಿಂತ ದೈಹಿಕ ಬಯಕೆಯೇ ಹೆಚ್ಚಾಗಿ ಕಾಡುತ್ತದೆ.

ಸಾಹಿತ್ಯಕವಾಗಿ ಸಾಧನೆ ಮಾಡಿ, ವೈಚಾರಿಕ ದೃಷ್ಟಿಯಿಂದ ಆಲೋಚಿಸುವ ಇವನು ಸಾಕಷ್ಟು ಧೈರ್ಯದಿಂದ ಬ್ರಾಹ್ಮಣತ್ವದಿಂದ ಆಗುವ ಅನ್ಯಾಯವನ್ನು ಖಂಡಿಸಿ, ಲೇವಡಿ ಮಾಡುತ್ತಾನೆ. ಆದರೂ ಶಾಲಿನಿ ಬೇಸರಪಟ್ಟುಕೊಳ್ಳುವುದಿಲ್ಲ. ಇಲ್ಲಿಯ ಕಥಾನಾಯಕ ಶಾಲಿನಿಯ ಮನಸ್ಸು ಪರಿವರ್ತನೆಯಾಗುವ ಮಟ್ಟಿಗೆ ತನ್ನ ಪ್ರಭಾವವನ್ನು ಆಕೆಯ ಮೇಲೆ ಬೀರುತ್ತಾನೆ. ಹೇಗೆಂದರೆ ಶಾಲಿನಿಯು ಧರ್ಮಶಾಸ್ತ್ರವನ್ನು 'ಕಗ್ಗ','ಸ್ಟುಪಿಡ್' ಎಂದು ಹೀಯಾಳಿಸುತ್ತಾಳೆ. 'ನೀನು ಮದುವೆಯಾಗುವುದು ಬೇಡ, ಮೈಸೂರಿನಲ್ಲೊಂದು ಕೆಲಸ ಕೊಡಿಸು, ಸುಮ್ಮನೆ ನಿನ್ನ ಜೊತೆಯಲ್ಲಿ ಇರುತ್ತೇನೆ ಎನ್ನುತ್ತಾಳೆ. ಅವಳು ಇವನ ಸಂಪರ್ಕದಿಂದ ಗರ್ಭಿಣಿಯಾದಾಗ ಯಾವುದಕ್ಕೂ ಇವನ ಮೇಲೆ ಸ್ವಲ್ಪವೂ ಬೇಸರಿಸದೆ, ಅಂಜದೆ ಅಬಾರ್ಷನ್

ಮಾಡಿಸಿಕೊಳ್ಳಲು ತಯಾರಿಯಾಗುವುದು, ಈ ಇಲ್ಲಾ ವಿಚಾರಗಳಲ್ಲೂ ಯಾವುದೇ ಸಂಘರ್ಷಕ್ಕೆ ಒಳಗಾಗದೆ ಸುಖಪಡುತ್ತಾಳೆ. ಅವಳಿಗೆ ಬದುಕಿನ ಬಗ್ಗೆ ಧನ್ಯತೆಯಿದೆ. ಮೇಲುನೋಟಕ್ಕೆ ಕ್ರಾಂತಿಕಾರಿಯ ಹಾಗೆ ಪೋಸು ಕೊಡುವ ನಾಯಕ ಒಳಗೆ ಅಷ್ಟು ಗಟ್ಟಿಯಾದವನಲ್ಲ ಎನಿಸುತ್ತದೆ. ಎಷ್ಟೇ ಇತಿಮಿತಿಗಳಿದ್ದರೂ ಕಾಮದ ಸುತ್ತಮುತ್ತ ಹೆಣೆದುಕೊಂಡಿರುವ ಈ ಕಥೆ ಪ್ರೀತಿ, ಪ್ರೇಮ ಮುಂತಾದ ಯೌವ್ವನದ ಉತ್ಕರ್ಷತೆಯಿಂದ ಜಾತಿ, ಮತ, ಧರ್ಮ, ಮಡಿವಂತಿಕೆಯನ್ನು ದಾಟಿ ಸಹಜವಾದ ಮಾನವೀಯವಾದ ಸಾರ್ಥಕ ಬುದುಕಿನ ಕಡೆ ತುಡಿಯುವ ಯುವಜನತೆಯ ಮನಸ್ಸನ್ನು ಅಭಿವ್ಯಕ್ತಿಸುತ್ತದೆ.

'ಗೀಜಗನಗೂಡು' ಗಂಭೀರವಾದ ಕಥೆ ಇದಾಗಿದೆ. ಕಾಮದ ಸೆಳೆತ ಈ ಕಥೆಯಲ್ಲಿಯೂ ಇದೆಯಾದರೂ ಅದರಾಚೆಗಿನ ಮಾನವೀಯ ಸಂಬಂಧಗಳ ಸಂಕೀರ್ಣತೆಗೆ ಸಂಕೇತವಾಗಿ ನಿಲ್ಲುತ್ತದೆ. ರಜಾದಿನವನ್ನು ಮದುಮಲೈ ಅರಣ್ಯದಲ್ಲಿ ಕಳೆಯಲೆಂದು ಹೋದವನಿಗೆ ರಷ್ಯನ್ ತರುಣಿಯ ಪರಿಚಯವಾಗಿ ಅದು ಸ್ನೇಹಕ್ಕೆ ತಿರುಗಿ, ಸ್ನೇಹ ಪ್ರಣಯವಾಗಿ ಕೊನೆಯವರೆಗೂ ಜೀವಂತ ಸಂಬಂಧವಾಗಿ ರೂಪುಗೊಳ್ಳುವುದು ಗಮನಾರ್ಹವಾಗಿದೆ. ಈಕೆಯನ್ನು ರಷ್ಯಾದಿಂದ ಕರೆದುತಂದಿದ್ದವನು ಹೋಟೆಲ್ ಮಾಲೀಕ ಪೊವೆಲ್. ಈಕೆಯನ್ನು ತನ್ನ ಹೆಂಡತಿ ಎಂದು ಹೇಳಿಕೊಂಡಿರುತ್ತಾನೆ. ಇವರಿಬ್ಬರ ಈ ಸಂಬಂಧದಿಂದ ಅಪಮಾನ, ಹಿಂಸೆ, ಅನುಭವಿಸಿದ ಪೊವೆಲ್ ಕೋಪತಾಪಗಳಿಂದ ಬೇಯುತ್ತ ಮುನಿಸಿಕೊಂಡು ಮೈಸೂರಿಗೆ ಹೋಗುತ್ತಾನೆ. ಕಥೆಯಲ್ಲಿ ಕಥಾನಾಯಕನೊಡನೆಯ ಸಂಬಂಧವೆ ಪ್ರಮುಖವಾಗಿದೆ. ಈ ಎಲ್ಲ ಸಂಬಂಧವನ್ನು ತನ್ನ ಗಂಡನಿಗೆ ತಿಳಿಸುತ್ತೇನೆಂದು ಅವಳು ಹೇಳುತ್ತಾಳೆ. ಇಲ್ಲಿ ಲೇಖಕರು ರಷ್ಯನ್ ಜನಾಂಗದಲ್ಲಿ ಬದುಕನ್ನು ಮುಕ್ತವಾಗಿ ಅನುಭವಿಸುವಿಕೆ ಮತ್ತು ಭಾರತೀಯ ಸಮಾಜದಲ್ಲಿ ಕಂಡುಬರುವ ಕಟ್ಟುಕಟ್ಟಳೆಗಳನ್ನು ಕುರಿತು ಚರ್ಚಿಸುತ್ತಾರೆ. ಕಾಮದ ಸೆಳೆತದ ಹಿನ್ನೆಲೆಯಲ್ಲಿಯೇ ಮಾನವೀಯ ಸಂಬಂಧಗಳ ಸಾಧ್ಯತೆಗಳನ್ನು ಗುರುತಿಸುತ್ತಾರೆ. ಈ ಉತ್ಕಟತೆ ಎಷ್ಟರಮಟ್ಟಿಗೆ ಬರುತ್ತದೆ ಎಂದರೆ ಮುನಿಸಿಕೊಂಡ ಪೊವೆಲ್ ಮತ್ತೆ ಬರುತ್ತಾನೆ. ಆ ರಾತ್ರಿ ಮೂವರು ಹಾಯಾಗಿ ಕಾಲ ಕಳೆಯುತ್ತಾರೆ. ಪೊವೆಲ್ ಕಂಠಪೂರ್ತಿಯಾಗಿ ಕುಡಿದು ಪ್ರಜ್ಞೆ ಇಲ್ಲದೆ ಮಲಗುತ್ತಾನೆ. ಇವಳು ಪೊವೆಲ್ ಜೊತೆ ಮಲಗಿದಂತೆ ನಟಿಸಿದರೂ ಮತ್ತು ಇವನ ಹಾಸಿಗೆಯೊಳಗೆ ಸೇರಿಕೊಂಡು ಇಬ್ಬರೂ ಸುಖದ ಕ್ಷಣವನ್ನು ಅನುಭವಿಸುತ್ತಾರೆ. ಕೊನೆಗೆ ಅವರಿಬ್ಬರೂ ಅನಿವಾರ್ಯವಾಗಿ ಅಗಲಬೇಕಾಗುತ್ತದೆ. ಈ ಅಗಲಿಕೆಯ ನೋವು ಉಳಿದರೂ ಉತ್ಕಟವಾಗಿ ಕಳೆದ, ಅವರ ಅನುಭವಗಳು ಇಬ್ಬರ ಮನಸ್ಸಿನಲ್ಲಿ ತುಂಬಿಕೊಂಡು ಆಪ್ತವಾಗಿಯೇ ಉಳಿಯುತ್ತದೆ.

'ಇನ್ನೊಂದು ಪ್ರಣಯ ಪ್ರಸಂಗ' ಕಥೆಯಲ್ಲೂ ಕಾಮವೇ ಪ್ರಧಾನ ಕೇಂದ್ರವಾಗಿದೆ. ಗುರು-ಶಿಷ್ಯರ ಪ್ರಣಯ ಸಂಬಂಧವನ್ನು ಅದರ ಕಡೆಗಾಣದ ಸೆಳೆತವನ್ನು ಇಲ್ಲಿ ನಿರೂಪಿಸಲಾಗಿದೆ. ಕಥಾನಾಯಕ ಹಿಂದಿನ ಸಂಬಂಧಗಳೆಲ್ಲವನ್ನು ಮರೆತು ಸಾಂಸಾರಿಕವಾಗಿ ಹಾಯಾಗಿದ್ದಾಗ ಇಂಗ್ಲೆಂಡಿನಿಂದ ಬರುವ ಪಲ್ಲವಿಯ ಪತ್ರವೊಂದು ಗಾಢವಾಗಿ ಇವನನ್ನು ಕಲಕುತ್ತದೆ. ಆಗ ವಿದ್ಯಾರ್ಥಿ ಜೀವನಕ್ಕೆ ಮೊಗಚಿಕೊಳ್ಳುತ್ತಾನೆ. ಹೀಗೆ ವರ್ತಮಾನ-ಭೂತದ ಘಟನೆಗಳ ನಡುವೆ ಲಾಳಿಡುತ್ತಾ ಕಥೆ ಹುರಿಗೊಳ್ಳುತ್ತದೆ. ಹೆಣ್ಣು-ಗಂಡಿನ ಸಂಬಂಧದಲ್ಲಿ ಪ್ರೀತಿ-ಲೈಂಗಿಕ ಬಯಕೆ ಇವೆರಡರ ಸೆಳೆತವನ್ನೂ ಇವುಗಳ ನಡುವಣ ಸೂಕ್ಷ್ಮತೆಯನ್ನೂ ಕಥೆಯಲ್ಲಿ ನಿರೂಪಿಸಲು ಪ್ರಯತ್ನಿಸಿದ್ದಾರೆ. ಕಾಲೇಜಿನಲ್ಲಿ ಪ್ರತಿಭಾವಂತ ವಿದ್ಯಾರ್ಥಿ ಎಂದು ಹೆಸರುಗಳಿಸಿದ್ದ ಇವನು ಯುವಕವಿ, ಕಥೆಗಾರ ಹಾಗೂ ವಿದ್ಯಾರ್ಥಿನಾಯಕ ಕೂಡ. ಈತನ ಸಾಹಿತ್ಯಕ ಸಾಧನೆಗೆ ಮಾರುಹೋಗಿದ್ದ ಅಧ್ಯಾಪಕಿ ಪಲ್ಲವಿಯು ಮನೆಗೆ ಕರೆದುಕೊಂಡು ಹೋಗಿ ಸಾಹಿತ್ಯ ಮತ್ತು ಇವನ ವ್ಯಕ್ತಿತ್ವದ ಬಗ್ಗೆ ಮನೆಯವರಿಗೆಲ್ಲ ಪರಿಚಯಮಾಡಿಕೊಡುತ್ತಾಳೆ. ಈ ರೀತಿಯ ಸಂಬಂಧ ಪ್ರಣಯವಾಗಿ ಬೆಳೆಯುತ್ತದೆ. ಈ ಸಂಬಂಧಗಳು, ಕಾಲೇಜಿನಲ್ಲಿ ಎಲ್ಲರಿಗೂ ತಿಳಿದು ಗೋಡೆಯ ಮೇಲೆಲ್ಲ ಇವರಿಬ್ಬರ ಹೆಸರು ರಾರಾಜಿಸುತ್ತವೆ. ಇದೆಲ್ಲದರ ಪರಿಣಾಮವಾಗಿ ಪಲ್ಲವಿ ತನ್ನ ಕೆಲಸಕ್ಕೆ ರಾಜಿನಾಮೆ ಕೊಡುತ್ತಾಳೆ. ಇವರ ತಂದೆಗೆ ಬೆಂಗಳೂರಿಗೆ ವರ್ಗವಾದಾಗ ಇವನೇ ಮದುವೆಯ ವಿಷಯ ಪ್ರಸ್ತಾಪ ಮಾಡಿದರೆ 'ಬೇಡ ನನ್ನ ನಿನ್ನ ಸಂಬಂಧ, ಮದುವೆಯಂತಹ ಸಂಬಂಧಕ್ಕಷ್ಟೇ ಸೀಮಿತವಾಗುವುದು ಬೇಡ' ಎನ್ನುತ್ತಾಳೆ. ಇಲ್ಲಿ ಲೇಖಕರು ಪ್ರೇಮ, ಕಾಮ, ಸಂಬಂಧಗಳು ಮದುವೆಯಂತಹ ಸಂಬಂಧಗಳಿಗಿಂತ ಉನ್ನತವಾದವು ಎಂಬುದನ್ನು ಪ್ರತಿಪಾದಿಸುವುದರ ಜೊತೆಗೆ ಇದಕ್ಕೆ ಯಾವುದೇ ಜಾತಿ, ವಯಸ್ಸು, ಅಂತಸ್ತು, ಹುದ್ದೆ ಯಾವುವೂ ಅಡ್ಡಬರಬಾರದೆಂಬುದನ್ನು ಪ್ರತಿಪಾದಿಸುತ್ತಾರೆ. ಈ ಪ್ರೇಮ, ಲೈಂಗಿಕ ಸೆಳೆತ ಎಷ್ಟು ತೀವ್ರವಾಗಿರುತ್ತದೆ-ಎಂದರೆ ಇವರ ಸಂಬಂಧಗಳು ಎಂಟು ವರ್ಷಗಳ ಕಾಲ ಕಡಿದುಹೋಗಿದ್ದರೂ ಅವಳಿಂದ ಬಂದ ಪತ್ರವು ಇವನನ್ನು ಕಲಕಿ ಬೆಂಗಳೂರಿಗೆ ಬರುವಂತೆ ಮಾಡುತ್ತದೆ. ಆಕೆಗೆ ಗಂಡ ಮಕ್ಕಳಿದ್ದರು ಈತನೊಡನೆ ಕಾಲಕಳೆಯುತ್ತಾಳೆ. ಇಲ್ಲಿ ಕಾಮದ ಸೆಳೆತವನ್ನು ಉತ್ಕಟವಾಗಿ ತರಲೆತ್ನಿಸಿದ್ದಾರೆ.

"ಮನುಷ್ಯನ ಮೂಲ ಪ್ರವೃತ್ತಿಗಳಾದ ಕಾಡುತನ, ದ್ವೇಷ, ಕಾಮುಕತೆ ಮುಂತಾದವು ಇನ್ನೂ ಹೇಗೆ ಆದಿಮ ಸ್ಥಿತಿಯಲ್ಲಿಯೇ ಇವೆ ಎಂಬ ವಾಸ್ತವ ಸ್ಥಿತಿಯನ್ನು 'ಕಾಡು' ಕಾದಂಬರಿಯ ಮೂಲಕ ನಾವು ತಿಳಿದುಕೊಳ್ಳಬಹುದು"[೬] ಪರಂಪರೆಯಿಂದ ಶ್ರೀಮಂತಿಕೆ ಮತ್ತು

ಯಜಮಾನಿಕೆಯನ್ನು ಉಳಿಸಿಕೊಂಡುಬಂದಿರುವ ಪ್ರತಿಷ್ಠಿತ ರೈತನಾದ ಚಂದ್ರೇಗೌಡ ತನಗೆ ಮಕ್ಕಳಿಲ್ಲದ್ದರಿಂದ ಅಕ್ಕನ ಮಗನನ್ನು ತಂದು ಸಾಕಿಕೊಂಡಿದ್ದಾನೆ. ಚಂದ್ರೇಗೌಡ ತನ್ನ ಹೆಂಡತಿಯನ್ನು ಯಾವತ್ತೂ ಮಾನವೀಯವಾಗಿ ನೋಡುವುದಿಲ್ಲ. ಇನ್ನು ಊರಿನಲ್ಲಂತೂ ಇವನನ್ನು ಪ್ರಶ್ನೆ ಮಾಡುವವರು ಹುಟ್ಟಿಯೇ ಇಲ್ಲ. ಈ ಎಲ್ಲ ಹಮ್ಮಿನಿಂದ ಪಕ್ಕದ ಹೊಸೂರ ಬಸಕ್ಕನ ಜೊತೆ ಲೈಂಗಿಕ ಸಂಪರ್ಕ ಹೊಂದಿರುತ್ತಾನೆ. ಇದು ತನ್ನ ಯಜಮಾನಿಕೆಯ ಪ್ರತಿಷ್ಠೆಗೆ ದಕ್ಕಿರುವ ಮಾನ್ಯತೆ ಎಂದು ಈತ ಭಾವಿಸುತ್ತಾನೆ. ಮುಗ್ಧೆ ಕಮಲಮ್ಮನಂತು ಗಂಡನನ್ನು ಪ್ರಶ್ನಿಸುವುದಿರಲಿ, ಅವನೆದುರು ನಿಂತು ಮಾತನಾಡಲಾರಳು. ಇವರಿಬ್ಬರೂ ಕಿಟ್ಟಿಯ ಮೂಲಕವೇ ಮಾತನಾಡುವುದು. ಕಿಟ್ಟಿಗಂತೂ ಮಾವನು ಪ್ರತಿದಿನ ರಾತ್ರಿ ಊಟದ ನಂತರ ಜಿರಕಿ ಜೋಡು ಮೆಟ್ಟಿ ಎಲ್ಲಿಗೋ ಹೊರಡುವುದು, ಅತ್ತೆ ಬುಳು ಬುಳು ಅಳುವುದು–ಒಂದೂ ಅರ್ಥವಾಗುವುದಿಲ್ಲ. ಈ ಎಲ್ಲ ಅನುಭವಗಳಿಗೆ ಈತ ಪರಕೀಯನಾಗಿ ಉಳಿಯುತ್ತಾನೆ. ಕಮಲಮ್ಮ ಮುಗ್ಧಳಾಗಿ ಬೇಯುತ್ತಲೇ ಗಂಡನನ್ನು ಬಸಕ್ಕನ ಸಂಪರ್ಕದಿಂದ ತಪ್ಪಿಸಲು ಹಾಗೂ ಗಂಡನ ಒಳಿತಿಗಾಗಿ ದೇವರ ಪೂಜೆ ಮಾಡಿಸುವುದರಲ್ಲಿ ತಲ್ಲೀನಳಾಗುತ್ತಾಳೆ. ಗಂಡನನ್ನು ಪ್ರತಿಭಟಿಸಲು ಸಾಧ್ಯವಾಗದು. ಮಾತಾಡಿದರೆ ಸಾಯಬೀಳ ಹೊಡೆತ. ಆದರೆ ಜೀತದಾಳು ಕೆಂಚ ತನ್ನ ಕೇರಿಯ ದೇವಿಯ ಜೊತೆ ಲೈಂಗಿಕ ಸಂಬಂಧ ಇಟ್ಟುಕೊಂಡಿದ್ದು ಪಂಚಾಯ್ತಿಗೆ ಬರುತ್ತದೆ. ಈ ಪಂಚಾಯ್ತಿಯಲ್ಲಿ, ವ್ಯಕ್ತಿ ಪಾವಿತ್ರವನ್ನು ಕಾಪಾಡಿಕೊಳ್ಳದ ಗುಡಿ ಅಯ್ನೋರು ಮತ್ತು ಇದೇ ತಪ್ಪನ್ನು ತಾನು ಮಾಡಿದರೆ ಸರಿ, ಇನ್ನೊಬ್ಬರು ಮಾಡಿದರೆ ತಪ್ಪು ಎಂದು ಭಾವಿಸುವ ಚಂದ್ರೇಗೌಡರೇ ಮುಂದಾಳುಗಳಾಗಿರುತ್ತಾರೆ. ಇಲ್ಲಿ ಚಂದ್ರೇಗೌಡ, ಬಸಕ್ಕನ ಸಖ್ಯ ಬೆಳೆಸುವುದು, ಗುಡಿ ಅಯ್ನೋರು ಹೊಲೇರ ಕಾಳಿ ಜೊತೆ ಲೈಂಗಿಕ ಸಂಬಂಧವನ್ನಿಟ್ಟುಕೊಳ್ಳುವುದು ಪ್ರಶ್ನಾತೀತ ಸಂಗತಿಗಳಾಗುತ್ತವೆ. ಗುಡಿ ಅಯ್ನೋರ ತಂಗಿ ಕದ್ದು ಬಸುರಾಗಿ ನೇಣುಹಾಕಿಕೊಂಡು ಸತ್ತಾಗ ರಾತ್ರೋರಾತ್ರಿ ಚಂದ್ರೇಗೌಡ ಆಕೆಯ ಹೆಣವನ್ನು ಸುಡಿಸಿ ಹಾಕುತ್ತಾನೆ. ಸಿಂಗಪ್ಪಣ್ಣನ ಹೆಂಡತಿ ಹೊಲೇರ ಹನುಮನ ಜೊತೆ ಕದ್ದು ಓಡಿ ಹೋದಾಗ 'ಅವಳೋದ್ರೆ ಇನ್ನೊಬ್ಬಳು ಬರ್‍ತಾಳೆ' ಎಂದು ತನ್ನ ದರ್ಪದ ಮನೋಭಾವವನ್ನು ಮೆರೆಯುತ್ತಾನೆ. ಹೀಗೆ ಲೇಖಕರು ಲೈಂಗಿಕ ಸಂಬಂಧಗಳಿಗೆ ಜಾತಿಯ ಮಡಿವಂತಿಕೆಯನ್ನು ದಾಟಿ ಅನಿವಾರ್ಯವಾಗಿ, ಸಹಜವಾಗಿರುವುದನ್ನು ಕಾದಂಬರಿಯಲ್ಲಿ ವಿವರವಾಗಿ ಗುರುತಿಸುತ್ತಾರೆ.

ಹೊಸೂರು ಮತ್ತು ಕುಗ್ರಾಮಗಳಲ್ಲಿ ನಡೆಯುವ ದಲಿತರ ಶೋಷಣೆ–ಇಡೀ ಭಾರತದ ಹಳ್ಳಿಗಳಲ್ಲೆಲ್ಲಾ ನಡೆಯುತ್ತದೆಂಬುದನ್ನು ಲೇಖಕರು ಧ್ವನಿಸುತ್ತಾರೆ. ಪಂಚಾಯ್ತಿಯಲ್ಲಿ ಆದ

ಜಗಳ, ಅಪಮಾನ, ಹಿಂಸೆ-ಇಡೀ ಕಾದಂಬರಿಗೆ ಪ್ರಮುಖ ತಿರುವನ್ನು ಕೊಡುತ್ತವೆ. ಲೇಖಕರು ಚಂದ್ರೇಗೌಡನಲ್ಲಿರುವ ಅಹಂಕಾರ, ಕ್ರೌರ್ಯ, ದರ್ಪ ಮತ್ತು ಅಜ್ಞಾನವನ್ನು ಒಟ್ಟಾಗಿಯೇ ಚಿತ್ರಿಸಿದ್ದಾರೆ. ಚಂದ್ರೇಗೌಡ ಹೆಣ್ಣು, ಭೂಮಿ, ಜಾತಿ ಇವುಗಳನ್ನು ತನ್ನ ಪ್ರತಿಷ್ಠೆ ಮತ್ತು ಅಜ್ಞಾನದಿಂದಲೇ ಗೆಲ್ಲಲು ಹೋಗುವುದು ಅವನ ಕುಟುಂಬ ವಿನಾಶವಾಗಲು ಕಾರಣವಾಗುತ್ತದೆ. ಮನುಷ್ಯನಲ್ಲಡಗಿರುವ ಈ 'ಕಾಡುತನ' ಎಂತಹ ಅತಿರೇಕವನ್ನು ತಲುಪಬಲ್ಲದೆಂಬುದು-ಚಂದ್ರೇಗೌಡನ ಪ್ರತಿರೂಪದಂತಿರುವ ಶಿವಗಂಗ, ಚಂದ್ರೇಗೌಡನ ರಾಗಿಮೆದೆಗೆ ಬೆಂಕಿಯನ್ನಿಡುವ ಘಟನೆಯಿಂದ ವ್ಯಕ್ತವಾಗುತ್ತದೆ. ಕಿಟ್ಟಿಯು ಮಾವ ಬಂದಮೇಲೆ ಕಮಲಮ್ಮನ ಕತೆ ಮುಗಿದಂತೆಯೇ ಎಂದು ಸರಿಯಾಗಿಯೇ ಭಾವಿಸುತ್ತಾನೆ. ಏಕೆಂದರೆ ಚಂದ್ರೇಗೌಡನ ಪಶುತನ ಕಿಟ್ಟಿಯ ಮುಗ್ಧ ಮನಸ್ಸಿಗೂ ತಾಕಿರುತ್ತದೆ. ಆದರೆ ಚಂದ್ರೇಗೌಡ "ವೋಗ್ಲಿ ಬುಡು ರುದ್ರ ನಾನೇನೂ ಕೆಟ್ಹೋಗದಿಲ್ಲ. ನಾವಂಥ ಸಣ್ಣ ಕೆಲಸ ಮಾಡೋಕೆ ಹೋಗಬಾರ್ದು"[೭] ಎಂದು ಹೇಳುವ ಮಾತು ಕಾದಂಬರಿಕಾರರು ಚಂದ್ರೇಗೌಡನಲ್ಲಿ ಮಾನವೀಯ ಗುಣ ಸ್ವಲ್ಪಮಟ್ಟಿಗಾದರೂ ಇದೆ ಎಂದು ಗುರುತಿಸಲು ಪ್ರಯತ್ನಿಸಿದರೂ ಅದು ಕೃತಕವೆನಿಸುತ್ತದೆ. ಅವನು ಹೃದಯಾಂತರಾಳದಿಂದ ಬದಲಾದವನಲ್ಲ. ನಿಜ ಸ್ಥಿತಿಯೆಂದರೆ ರಾಗಿ ಮೆದೆಯು ಬೆಂಕಿಗೆ ಆಹುತಿಯಾದ್ದರಿಂದ ಚಂದ್ರೇಗೌಡನ ಜೀವಿತಕ್ಕೆ ಏನೂ ತೊಂದರೆಯಾಗುವುದಿಲ್ಲ. ಆದರೆ ಅವನ ಮನೆಯಲ್ಲಿ ಜೀತಮಾಡಿಕೊಂಡು ಬದುಕುತ್ತಿದ್ದ ದಲಿತ ಕುಟುಂಬಗಳಿಗೆ ಪ್ರತಿವರ್ಷದಂತೆ ಅರೆ ಹೊಟ್ಟೆಯ ಬಾಳೇ ಗತಿಯಾಗುತ್ತದೆ.

ಮುಗ್ಧೆಯಾದ ಕಮಲಮ್ಮ ಮೊದಲಿನಿಂದಲೂ ತನ್ನ ಗಂಡ ಬೇರೊಬ್ಬಳನ್ನು ಇಟ್ಟುಕೊಂಡಿದ್ದರಿಂದ ವಂಚಿತಳಾಗಿದ್ದಳು. ಬಸಕ್ಕನ ಕಡೆ ಮುಖ ಹಾಕದ ಹಾಗೆ ತಪ್ಪಿಸಬೇಕಾದರೆ ಪೂಜೆ ಹಾಕಿಸಿದರೆ ಒಳ್ಳೆಯದೆಂದು ನಂಬಿದ್ದಳು. ಈಗಲೂ ಗಂಡನ ಒಳಿತಿಗಾಗಿ ಊರ ಹೊರಗಿನ ಗುಡಿಕಟ್ಟೆ ದೇವಸ್ಥಾನಕ್ಕೆ ಕಿಟ್ಟಿಯನ್ನು ಕರೆದುಕೊಂಡು ಮಬ್ಬುಗತ್ತಲೆಯಲ್ಲಿ ಪೂಜೆ ಹಾಕಿಸಲು ಹೊರಡುತ್ತಾಳೆ. ಈ ಸಂದರ್ಭದಲ್ಲೇ ಅಮಾಯಕಳಾದ ಕಮಲಮ್ಮ ಇಡೀ ಜೀವನದಲ್ಲಿ ಅತೃಪ್ತಿಯಿಂದ ನೊಂದು, ಬೆಂದು ಕೊನೆಗೆ ಗಂಡನ ನಿರ್ಲಕ್ಷ್ಯ ಮತ್ತು ಅಹಂಕಾರಗಳಿಂದಾಗಿ ಎದುರಾಳಿಗಳ ಅತ್ಯಾಚಾರಕ್ಕೆ ಒಳಗಾದದ್ದು ದುರಂತಮಯವಾಗಿದೆ. ಚಂದ್ರೇಗೌಡ ಕೋಟೆಯಿಂದ ಬಂದವನೆ ಪರಿಸ್ಥಿತಿಯನ್ನು ಅರಿತುಕೊಂಡು ಭಗಭಗನೆ ಉರಿಯುತ್ತಾನೆ. ಅಪಮಾನ, ಹಿಂಸೆ, ರೋಷ ಕೋಪ-ತಾಪಗಳಿಂದ ಉಕ್ಕುತ್ತಿದ್ದ ಆತ ಒಮ್ಮೆಲೇ 'ಕಮಲೀ' ಎಂದು ಕೂಗುವುದರ ಮೂಲಕವೇ ತನ್ನೆಲ್ಲ

ಯಾತನೆಯನ್ನು ಪ್ರಕಟಿಸುತ್ತಾನೆ. ತಕ್ಷಣ ತೊಲೆಗೆ ಸಿಕ್ಕಿಸಿದ್ದ ಮಚ್ಚನ್ನು ಎಳೆದುಕೊಂಡು ಹೊರಡುತ್ತಾನೆ. "ತಮಟೆ ಕೊಂಬಿನ ಸದ್ದು ಕಿವಿ ಕಿವುಡಾಗಿಸುತ್ತಿದ್ದ ಹಾಗೆ ಮಾವ ಮಚ್ಚನ್ನು ಎರಡೂ ಕೈಯಿಂದ ಮೇಲೆತ್ತಿ ಟಗರಿನ ಕತ್ತಿಗೆ ಜೋರಾಗಿ ಅಪ್ಪಳಿಸಿದರು. ಒಂದೇ ಹೊಡೆತಕ್ಕೆ ಕತ್ತು ಕತ್ತರಿಸಿ ಬಿದ್ದು ರಕ್ತ ಚಿಲ್ಲೆಂದಿತು"[೮] ಚಂದ್ರೇಗೌಡನು ಶಿವಗಂಗನನ್ನು ಮುಗಿಸಿದ್ದನ್ನು ಲೇಖಕರು ಸಾಂಕೇತಿಕವಾಗಿ ಚಿತ್ರಿಸಿದ್ದಾರೆ. ಕಿಟ್ಟಿಗೆ ನಿಜಕ್ಕೂ ಇದು ರಾಕ್ಷಸರ ಲೋಕವೆಂಬುದು ಸಾಬೀತಾಗುತ್ತದೆ. ಧಗ ಧಗ ಉರಿಯುವ ರಾಗಿ ಮೆದೆಗಳು, ಆಳು ಕೂಗಿನ ಹಕ್ಕಿಯ ಕತೆ, ರಕ್ತ ಚೆಲ್ಲಾಡಿದ ಹೊಸೂರಿನ ಓಕಳಿ. ಕಾಡಿನೊಳಗಿಂದ ನುಗ್ಗಿಬಂದ ರಾಕ್ಷಸರು, ಅತ್ತೆಯ ತೊಡೆಯ ರಕ್ತ. ಕುಂತಲ್ಲೆ ನಡುಗಿದ ಕಿಟ್ಟಿ, ಮಾನವನಲ್ಲಡಗಿರುವ ಪಶುತ್ವವನ್ನು, ಕ್ರೌರ್ಯವನ್ನು, ಕಾಮವನ್ನು, ದಬ್ಬಾಳಿಕೆಯ ಮನೋವೃತ್ತಿಯನ್ನು, ಮುಗ್ಧ ಬಾಲಕನ ಮೂಲಕ ಅತ್ಯಂತ ಪರಿಣಾಮಕಾರಿಯಾಗಿ ಎಲ್ಲ ಸಂಕೀರ್ಣತೆಗಳೊಂದಿಗೆ ಕಟ್ಟಿಕೊಟ್ಟಿದ್ದಾರೆ.

'ಪರಸಂಗದ ಗೆಂಡೆತಿಮ್ಮ' ಕಾದಂಬರಿಯಲ್ಲಿ ಗೆಂಡೆತಿಮ್ಮ ಮತ್ತು ಮರಂಕಿಯರ ಬದುಕಿನ ಸಮೃದ್ಧ ವಿವರಗಳಿಂದ ಹೆಣೆದುಕೊಂಡಿರುವ ಈ ಕಾದಂಬರಿಯನ್ನು ರಂಜನೀಯವಾಗಿ ಕಥೆ ಹೇಳುವ ಮೂಲಕ ಅತ್ಯಂತ ಆಕರ್ಷಕ ರೀತಿಯಲ್ಲಿ ಲೇಖಕರು ಕೊಂಡೊಯ್ಯುತ್ತಾರೆ. ಆಲನಹಳ್ಳಿಯವರು ತಮ್ಮ ಕಥೆಯಲ್ಲಿ ಸ್ತ್ರೀಯನ್ನು 'ಕಾಮ'ದ ಸೆಳೆತದ ಸುತ್ತಮುತ್ತಲಿನ ವಿವರಗಳ ನಡುವೆಯೇ ಚಿತ್ರಿಸುತ್ತ ಹೋಗುತ್ತಾರೆ. ಮರಂಕಿಯನ್ನು ಮದುವೆಯಾದ ಗೆಂಡೆತಿಮ್ಮ ಮರಂಕಿಯ ಮೈಮಾಟಕ್ಕೆ, ಅವಳು ಬಳಸುವ, ಸ್ನೋ, ಪೌಡರು, ಗಮನದೆಣ್ಣೆ, ಬಾಡಿ, ಲಂಗ- ಇತ್ಯಾದಿಗಳಿಗೆ ಮಾರುಹೋಗಿ, ಅವಳು ತನ್ನ ಪಾಲಿಗೆ ಲಭಿಸಿದ್ದು ತನ್ನ ಪುಣ್ಯವೆಂದು ಭಾವಿಸುತ್ತಾನೆ. ಗೆಂಡೆತಿಮ್ಮ ಮರಂಕಿಯನ್ನು ಸರ್ವವಿಧದಿಂದಲೂ ತೃಪ್ತಿಪಡಿಸಲಾರದ್ದರಿಂದ ಅವಳು ಮಹದೇವನಾಯಕ ಮತ್ತು ಶಿವಣ್ಣನವರುಗಳ ಜೊತೆ ಸಂಬಂಧ ಇಟ್ಟುಕೊಂಡು ತನ್ನ ಲೈಂಗಿಕ ತೃಷೆಯನ್ನು ಹಿಂಗಿಸಿಕೊಳ್ಳುತ್ತಾಳೆ. ಅತ್ತೆ ಬೇದಿಯಮ್ಮ ಕೂಡ ಬಂಗಾರದಂತಹ ಸೊಸೆ ಸಿಕ್ಕಳೆಂದು ಮೊದಲಿಗೆ ಭಾವಿಸುತ್ತಾಳೆ. ಆದರೆ ಅವಳು ಬಳಸುವ ವಸ್ತುಗಳು ಹಾಗೂ ವಾರಕ್ಕೆರಡು ದಿನ ಸ್ನಾನ ಮಾಡುವುದು, ಸಾರಿಗೆ ಒಗ್ಗರಣೆ ಹಾಕುವುದು- ಇವು ನಮ್ಮ ಮಟ್ಟಕ್ಕಲ್ಲ ಇದೇನಿದ್ರು 'ಹಾರುವ'ರಿಗೆ ಮಾತ್ರ. ಈ ಬಡಿವಾರದ ರೀತಿಯಲ್ಲಿ ಬದುಕಿದರೆ ಮನೆ ಹಾಳಾಗುತ್ತದೆ-ಎಂದು ಅವಳು ಭಾವಿಸುತ್ತಾಳೆ. ಜೊತೆಗೆ ಮರಂಕಿಯು ತನ್ನ ಹಿರಿಯ ಸೊಸೆಯ ಹಾಗೆ ತನ್ನ ಅತ್ತೆತನಕ್ಕೆ ಬಗ್ಗದ್ದಕ್ಕೆ ಒಳಗೊಳಗೆ ಕುದಿಯುತ್ತಾಳೆ. ಇಲ್ಲಿ ಮರಂಕಿ ನಾಜೂಕಾಗಿ ಬದುಕುವುದರ ಜೊತೆಗೆ ತನ್ನ ಗಂಡನ ಮನೆಯನ್ನು ಸುಧಾರಿಸಲು

ಪ್ರಯತ್ನಿಸುವುದನ್ನು ಮೆಚ್ಚಬಹುದಾಗಿದೆ. ಆದರೆ ಬೇದಿಯಮ್ಮ ಮಾತ್ರ ಮರಂಕಿಯ ಈ ರೀತಿಯ ನಡವಳಿಕೆಗಳನ್ನು ನಿಗ್ರಹಿಸಲಿಕ್ಕೆ ಆಗದ್ದಕ್ಕೆ ಒಳಗೊಳಗೆ ಕುದಿಯುತ್ತಾಳೆ. ಮರಂಕಿಯ ಬದುಕಿನ ರೀತಿ ಮತ್ತು ಬೇದಿಯಮ್ಮನ ಒಳಗುದಿ ಇವುಗಳು ಸಹಜವಾಗಿ ಬಂದಿದೆ. ಮರಂಕಿಯು ಛಲದ ಹೆಣ್ಣೆ, ತಾನು ರೂಢಿಸಿಕೊಂಡಿದ್ದ ಕ್ರಮಗಳನ್ನು ಏನೇ ತೊಂದರೆಯಾದರೂ ಬಿಡುವ ಮನೋಭಾವದವಳಲ್ಲ. ಇವುಗಳನ್ನೆಲ್ಲ ನೋಡಿ ಸುಮ್ಮನಿರಲು ಆಗದ ತಾಯಿಯ ಮನಸ್ಥಿತಿಯನ್ನು ಲೇಖಕರು "ಬೇದಿಯಮ್ಮನಿಗೆ ಯಾಕೊ ಕಿರಿಯ ಸೊಸೆಗೆ ಸೋತೆ ಎಂಬ ಅನುಮಾನ ಕಾಡತೊಡಗಿತು. ಇವಳನ್ನು ಹತೋಟಿಯಲ್ಲಿಟ್ಟುಕೊಂಡು ವಗತನ ಮಾಡುವುದು ಆಗದ ಮಾತು"[೯] ಎಂಬುದರ ಮೂಲಕ ಚಿತ್ರಿಸಿದ್ದಾರೆ. ಇಲ್ಲಿ ಹಳ್ಳಿಯ ಅತ್ತೆಯರು ತಮ್ಮ ಸೊಸೆಯರ ಮೇಲೆ ಅಧಿಕಾರ ಚಲಾಯಿಸಿ ಅವರನ್ನು ಹಿಡಿತದಲ್ಲಿ ಇಟ್ಟುಕೊಳ್ಳಲು ಪ್ರಯತ್ನಿಸುವುದು ಹಾಗೂ ಆ ಹಿಡಿತ ತಪ್ಪಿದಂತಾದಾಗ ಚಿಂತೆಗೀಡಾಗುವುದನ್ನು ಕಾಣಬಹುದು. ಸುಣ್ಣವನ್ನು ಕೊಟ್ಟರೂ ಬೆಣ್ಣೆಯೆಂದು ನುಂಗುತ್ತಿದ್ದವನೂ, ಬಸವಣ್ಣನಂತಹವನೂ, ಆದ ತನ್ನ ಮಗ-ಈಗ ಹೆಂಡತಿಯ ತಾಳಕ್ಕೆ ತಕ್ಕಂತೆ ಕುಣಿಯುತ್ತಿದ್ದಾನೆಂದು ಹೇಳಿಕೊಂಡು ಬೇದಿಯಮ್ಮ ವ್ಯಥೆಪಡುವ ದೃಶ್ಯ ಸಹಜವಾಗಿ ಮೂಡಿ ಬಂದಿದೆ. ಗೆಂಡೆತಿಮ್ಮ ಇಲ್ಲಿ ತಾನು ಕೈ ಹಿಡಿದ ಹೆಂಡತಿ ಮತ್ತು ತನ್ನನ್ನು ಹೆತ್ತು ಹೊತ್ತು ಸಾಕಿದ ಅವ್ವ ಇವರಿಬ್ಬರ ನಡುವೆ ಕತ್ತರಿಗೆ ಸಿಕ್ಕಿದ ಅಡಕೆಯಂತಾಗುತ್ತಾನೆ. ಆದರೂ ಹೆಂಡತಿಯ ಪ್ರೇರಣೆಯಿಂದ ಸಾಕಷ್ಟು ಬದಲಾವಣೆಯಾಗುತ್ತಾನೆ.-ವಾರಕ್ಕೊಮ್ಮೆಯಾದರೂ ಸ್ನಾನ ಮಾಡುವುದು, ಬಟ್ಟೆಯನ್ನು ಸ್ವಚ್ಛವಾಗಿಟ್ಟುಕೊಳ್ಳುವುದು-ಇತ್ಯಾದಿ ಹೀಗೆ ಈಚೀಚೆಗೆ ಸ್ವಚ್ಛವಾಗಿರುತ್ತಿದ್ದ ಇವನು ಹೆಂಡತಿಗೆ ಬೇಕಾದ್ದೆಲ್ಲವನ್ನು ತಂದು ಕೊಡುತ್ತಿದ್ದುದನ್ನು ಕಂಡ ತಾಯಿ "ತಂದ್ಕೊಡು, ತಂದ್ಕೊಡು, ನಾಯಕಸಾನಿ ಕೇಳಿದ್ದೆಲ್ಲ ತಂದ್ಕೊಡು, ಈ ಮನೆ ಉದ್ಧಾರ ಮಾಡಕ್ಬಂದವಳ ಇವ್ಳು? ಇಲ್ಲಾನೂ ಗುಡ್ಸಿ ಗುಂಡಾಂತರ ಮಾಡ್ಬುಡ್ತಾಳೆ ಚಿನಾಲಿ"[೧೦] ಎನ್ನುತ್ತಾಳೆ. ಇದು ಎಷ್ಟು ಅತಿರೇಕಕ್ಕೆ ಹೋಗುತ್ತದೆ-ಎಂದರೆ ಗೆಂಡೆತಿಮ್ಮ ವ್ಯಾಪಾರಕ್ಕೆ ಹೋಗಿದ್ದಾಗ ಬೇದಿಯಮ್ಮ ಮರಂಕಿಯ ಬೋಮಾನವನ್ನು ತಾಳಲಾರದೆ ತನ್ನ ಹಿರಿಯ ಮಗನಾದ ಗೂಳನಾಯಕನಿಂದ ಹೊಡೆಸುತ್ತಾಳೆ. ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಮನೆಯ ಆಗು ಹೋಗುಗಳನ್ನೆಲ್ಲ ನೋಡಿಕೊಳ್ಳುವ ಮನೆಯ ಹಿರಿಯನಾದ ಗಂಡಸು ಈ ಬಗೆಯ ಹಕ್ಕನ್ನು ಹೊಂದಿರುವುದನ್ನು ಈ ಘಟನೆಯು ವಿವರಿಸುತ್ತದೆ. ತನ್ನ ಹೆಂಡತಿಯನ್ನು ಅವ್ವ ಮತ್ತು ಅಣ್ಣ ಹೊಡೆದು ಅವಮಾನ ಮಾಡಿದ್ದನ್ನು ಕೇಳಿ ಪತ್ನಿಯ ಬಗ್ಗೆ ಕನಿಕರ ಮೂಡುತ್ತದೆ. ಆ ಭರದಲ್ಲಿ ಅದಕ್ಕೆ ಪ್ರಮುಖ ಕಾರಣಳಾದ ಅವ್ವನನ್ನ ಚೆನ್ನಾಗಿ ಬೈಯ್ಯುತ್ತಾನೆ. ಇಲ್ಲಿ ಬೇದಿಯಮ್ಮನು ಹೆತ್ತ ಮಗನಿಂದ

ಅಪಮಾನಿತಳಾದಾಗ ಅನುಭವಿಸುವ ನೋವನ್ನು ಸ್ಪಷ್ಟವಾಗಿ ಕಾಣುತ್ತೇವೆ. ಸೊಸೆಯರು ಅನುಭವಿಸುವ ಹಿಂಸೆ, ಅಪಮಾನ, ವಾರಗಿತ್ತಿಯರ ಜಗಳ, ಭಾವನ ಬೈಗುಳಗಳನ್ನು ತಾಳ್ಮೆಯಿಂದ ಸಹಿಸಿಕೊಳ್ಳುವ ಸೊಸೆಯಾಗಿಯೂ ಕಂಡುಬರುತ್ತಾಳೆ. ಜೊತೆಗೆ ಗಂಡನ ಸ್ಥಿತಿಯನ್ನು ಅರಿಯುವಂತಹ ಹೆಂಡತಿಯೂ ಆಗಿದ್ದಾಳೆ. ಈ ರೀತಿಯ ಮರಂಕಿಯ ವ್ಯಕ್ತಿತ್ವವನ್ನು ಪರಿಚಯಿಸುತ್ತಲೇ, ಅವಳ ಇನ್ನಿತರ ಮುಖಗಳನ್ನು ಕಾಣಬಹುದು. ಮರಂಕಿಯು ತೌರಿಗೆ ಹೋಗಿದ್ದಾಗ ನಂಜನಗೂಡಿನ ತನ್ನ ಸೋದರಮಾವನ ಮಗನಾದ ಮಹಾದೇವನಾಯಕನಿಂದ ಲೈಂಗಿಕ ಸುಖ ಪಡೆಯುತ್ತಾಳೆ. ಗೆಂಡೆತಿಮ್ಮನು ಮರಂಕಿಯ ಹೃದಯಕ್ಕೆ ಹತ್ತಿರನಾದರೂ ಸಹ ಅವಳಿಗೆ ಲೈಂಗಿಕ ತೃಪ್ತಿಯನ್ನು ತುಂಬು ಪ್ರಮಾಣದಲ್ಲಿ ನೀಡಲಾರದ ಸಂಗಾತಿಯಾಗಿದ್ದಾನೆ.

ಸಾಲುಂಡಿಯ ಹೆಂಗಸರ ಎಲೆ ಅಡಿಕೆ ಮೊದಲುಗೊಂಡು ಬೀಡಿ ಬೆಂಕಿಪೊಟ್ಟಣ, ಮಕ್ಕಳ ಸಣ್ಣ ಪುಟ್ಟ ತಿಂಡಿ, ಸೀಮೆಎಣ್ಣೆ ಕುಪ್ಪಿ ಮುಂತಾದವುಗಳನ್ನು ತಂದುಕೊಡುವ ಇವನು ಊರಿಗೆ ಅನಿವಾರ್ಯವಾಗಿ ಬೇಕಾದ ಸಂಗಾತಿಯಾಗಿದ್ದಾನೆ. ಸಾಲುಂಡಿಯಲ್ಲಿ ರತ್ನಾಳು ಧರಿಸುತ್ತಿದ್ದ ಪೇಟೆಯವರ ವಸ್ತುಗಳ ಆಕರ್ಷಣೆಯನ್ನು ತಾಳಲಾರದೆ ಇಡೀ ಊರಿನ ಹೊಸ ಸೊಸೆಯರು, ಮೈನೆರೆದ ಹೆಣ್ಣುಮಕ್ಕಳು ಹಿರಿಯರಿಗೆ ಕಾಣದ ಹಾಗೆ ಗೆಂಡೆತಿಮ್ಮನಿಂದ ತಾವೂ ತರಿಸಿಕೊಳ್ಳುತ್ತಾರೆ. ಗೆಂಡೆತಿಮ್ಮ ಈ ರೀತಿಯ ಪ್ರಗತಿಯಿಂದ ಸಾಕಷ್ಟು ಬದಲಾವಣೆಯನ್ನು ಕಾಣುತ್ತಾನೆ. ಮರಂಕಿ ಇದಕ್ಕೆ ಪ್ರಮುಖ ಕಾರಣವಾಗುತ್ತಾಳೆ. ಗೆಂಡೆತಿಮ್ಮ ಮುಗ್ಧನಂತೆ ಕಂಡುಬಂದರೆ, ಮರಂಕಿಯು ಹೆಚ್ಚು ಚಾಕಚಕ್ಯತೆಯ ಹೆಣ್ಣಾಗಿ ಕಂಡುಬರುತ್ತಾಳೆ. ಆದ್ದರಿಂದಲೇ ಮರಂಕಿಯು ಶಿವಣ್ಣನೊಡನೆ ಊರಿಗೆ ಹೋಗುವಾಗ ಶಿವಣ್ಣನಿಂದ ಲೈಂಗಿಕ ಸುಖವನ್ನು ಪಡೆಯುತ್ತಾಳೆ. ಈ ಎಲ್ಲ ಘಟನೆಗಳ ನಡುವೆಯೇ ಮರಂಕಿಯ ಬಗ್ಗೆ ಗೆಂಡೆತಿಮ್ಮನಿಗೆ ಪ್ರೀತಿ, ಸಿಟ್ಟು, ಭಯ, ಅನುಮಾನ- ಎಲ್ಲಾ ಒಟ್ಟೊಟ್ಟಾಗಿಯೇ ಇರುತ್ತವೆ. ಆದರೆ ಊರಿನಲ್ಲಿ ಮರಂಕಿ ಮತ್ತು ಶಿವಣ್ಣನ ಹೆಸರುಗಳನ್ನು ಸೇರಿಸಿ ಅನೇಕರು ಮಾತಾಡಲು ಆರಂಭವಾದಾಗ ಈತನಿಗೆ ತನ್ನ ಹೆಂಡತಿಯ ಮೇಲೆ ಅನುಮಾನ ಹೆಚ್ಚುತ್ತದೆ. ಸಾಲುಂಡಿಯಲ್ಲಿ ನಾಗರೀಕ ವಸ್ತುಗಳ ಪ್ರವೇಶದಿಂದ ಹಲವಾರು ತೊಂದರೆಗಳುಂಟಾಗುತ್ತದೆ. ಇದಕ್ಕೆಲ್ಲ ಗೆಂಡೆತಿಮ್ಮನೆ ಕಾರಣ ಎಂದು ಭಾವಿಸಿ ಪಂಚಾಯಿತಿಗೆ ಕರೆಸುತ್ತಾರೆ. ಎಂದೂ, ಯಾರಿಗೂ ಕೆಟ್ಟದ್ದನ್ನು ಬಯಸದ ಮೃದು ಹೃದಯದ ಗೆಂಡೆತಿಮ್ಮನಿಗೆ ಪಂಚಾಯ್ತಿಯಲ್ಲಿ ಆದ ಅಪಮಾನ, ಅದರಲ್ಲೂ ಅವನನ್ನು ಮುತ್ತಿದ 'ತಾಯ್ಗಂಡ ಸೂಳೇಮಗ', 'ಮನೇಹಾಳ', 'ದೇಸ ಕೆಡ್ಸಿ ಬಂದವನು' ಎಂಬ ಬಗೆಬಗೆಯ ಬೈಗುಳಗಳು ತೀವ್ರವಾಗಿ ಹಿಂಸಿಸುತ್ತವೆ. ಬೆಳಗ್ಗೆ ಎದ್ದು ಈ ಊರಿನಲ್ಲಿ ಮುಖ

ತೋರಿಸುವುದು ಸಹ ಅವನ ಪಾಲಿಗೆ ಕಷ್ಟವಾಗುತ್ತದೆ. ಸುಮಾರು ಕೋಳಿ ಕೂಗುವ ಹೊತ್ತಿಗೆ ಮಾನಸಿಕವಾಗಿ, ದೈಹಿಕವಾಗಿ ಬಳಲಿ ಬೆಂಡಾಗಿ ಬಂದುದು ತನ್ನ ಮನೆಯ ಕದ ತಟ್ಟುತ್ತಾನೆ. ಮರಂಕಿಯು ಶಿವಣ್ಣನೊಡನೆ ರತಿಸುಖದಲ್ಲಿ ಮುಳುಗಿದ್ದಾಳೆ. ಒಳಗೆ ಪಿಸು ಪಿಸು ಮಾತುಗಳು ಮರಂಕಿ ಒಳಗೇ ಬೆವರುತ್ತಾಳೆ. ಗಡಗಡ ನಡುಗುತ್ತಾಳೆ. ಒಳಗಿನಿಂದ ಶಿವಣ್ಣ ಹೊರಗೆ ಓಡಿಹೋಗುತ್ತಾನೆ. ಯಾರನ್ನು ದೇವರಂತಹ ಮನುಷ್ಯ ಎಂದು ತಾನು ನಂಬಿದ್ದನೊ? ತನ್ನ ಮರಂಕಿ ಹಾಗೆ ಮಾಡಲು ಸಾಧ್ಯವೇ ಇಲ್ಲ ಎಂದು ಅಚಲವಾಗಿ ನಂಬಿದ್ದನೊ? ಅದೆಲ್ಲ ಕ್ಷಣಮಾತ್ರದಲ್ಲಿ ಕಣ್ಣೆದುರಿಗೆ ಸುಳ್ಳಾಗಿ, ತೀವ್ರಾಘಾತಕ್ಕೆ ಒಳಗಾಗುತ್ತಾನೆ. ಮನುಷ್ಯರ ಬಗ್ಗೆ ತಾನು ಹೊಂದಿದ್ದ ದೃಢವಾದ ನಂಬಿಕೆಯನ್ನು ಕಿತ್ತೆಸೆಯುತ್ತಾನೆ. ಆ ನಂಬಿಕೆ ಛಿದ್ರ ಛಿದ್ರವಾಗಿ ಅವನ ಸ್ವಾಭಿಮಾನಕ್ಕೆ ಹೊಡೆತ ಬಿದ್ದಾಗ ಆ ಎಲ್ಲಾ ನೋವುಗಳನ್ನು ತಾಳಲಾರದೆ ತನ್ನ ಅಂತ್ಯವನ್ನು ತಾನೇ ಕಂಡುಕೊಳ್ಳುತ್ತಾನೆ. ಗಂಡನ ಈ ದುರಂತ ಸಾವಿನ ಸುದ್ದಿ ತಿಳಿದ ಮರಂಕಿಯು ಯಾವುದೇ ಪೂರ್ವಾಪರ ಯೋಚನೆಯನ್ನು ಮಾಡದೆ ನೈತಿಕ ಹೊಣೆಯನ್ನು ಹೊತ್ತು ತಾನೂ ನೇಣು ಬಿಗಿದುಕೊಂಡು ಸಾವನ್ನಪ್ಪುತ್ತಾಳೆ. ಮರಂಕಿ ಶಿವಣ್ಣನೊಡನೆ ಲೈಂಗಿಕ ಸಂಪರ್ಕವನ್ನಿಟ್ಟುಕೊಂಡು ಸುಖಪಟ್ಟವಳಾದರೂ ಆ ತನಕ ಅದೊಂದು ಸಾಮಾಜಿಕ ಪ್ರತಿಷ್ಠೆ ಎಂದೇ ಭಾವಿಸಿದ್ದಳು. ಗಂಡನ ಇತಿಮಿತಿಗಳೆಲ್ಲವನ್ನು ಬಲ್ಲವಳಾಗಿದ್ದು ಹೊಂದಿಕೊಂಡು ಬದುಕುತ್ತಿದ್ದ ಇವಳಿಗೆ ಯಾವ 'ನೈತಿಕ' ಮೌಲ್ಯಗಳೂ ಈತನಕ ಕಾಡಿರಲಿಲ್ಲ. ಅವಳು ಯಾರೂ 'ಮಾಡಬಾರದ್ದೇನೂ ಮಾಡಿಲ್ಲ'ವೆಂದು ತನಗೆ ತಾನೆ ಸಂತೈಸಿಕೊಂಡಿದ್ದಳು. ತನ್ನ ಗಂಡ ಇಷ್ಟಕ್ಕಾಗಿ ಪ್ರಾಣ ಕಳೆದುಕೊಂಡು ಬಿಡುತ್ತಾನೆಂದು ಕಿಂಚಿತ್ತಾದರೂ ಅನ್ನಿಸಿದ್ದರೆ ಅವಳು ಖಂಡಿತವಾಗಿಯೂ ಈ ಸುಖವನ್ನು ಬಯಸುತ್ತಿರಲಿಲ್ಲ. ಕೊನೆಗೆ ತನ್ನ ತಿಳಿಗೇಡಿತನದಿಂದ ಸಂಭವಿಸಿದ ಈ ದುರಂತದಿಂದ ಚೇತರಿಸಿಕೊಳ್ಳಲಾರದೆ ತಾನೂ ತನ್ನ ಅಂತ್ಯವನ್ನು ಕಂಡುಕೊಳ್ಳುತ್ತಾಳೆ.

"ಲೇಖಕರು ಮರಂಕಿಯ ದೇಹ ಸೌಂದರ್ಯ ಇತ್ಯಾದಿಗಳನ್ನು ಚಿತ್ರಿಸುವಾಗ ಒಂದು ರೀತಿಯ ಲೈಂಗಿಕ ಚಟದ ರೀತಿಯಲ್ಲಿ ವರ್ಣಿಸುತ್ತಾರೆ. ಗೆಂಡೆತಿಮ್ಮನ ಸಮಕಾಲೀನರಾದ ಬೆಟ್ಟ, ಕಾಳ, ಪಿಲ್ಲಿ ಮುಂತಾದವರು ಮರಂಕಿ ಬಗ್ಗೆ ಮಾತಾಡಿಕೊಳ್ಳುವಾಗಲೂ ಅವಳ ಅತ್ಯಾಕರ್ಷಕ ಅಂಗಾಂಗಗಳನ್ನು ಕುರಿತು ಚರ್ಚಿಸುತ್ತಾರೆ. ನಂತರ ಶಿವಣ್ಣ ಗೆಂಡೆತಿಮ್ಮನ ಮನೆಗೆ ಬಂದಿದ್ದಾಗ 'ಮರಂಕಿಯ ಗಡಿಗೆ ಗಾತ್ರದ ಮೊಲೆಯನ್ನು ನೋಡಿ ಮೈ ಜುಮ್ಮೆನ್ನುತ್ತದೆ' ಎಂದು ಚಿತ್ರಿಸುತ್ತಾರೆ. ಹೀಗೆ ಒಂದೇ ವಿಚಾರವನ್ನು ಅತಿರೇಕ ಎಂಬ ಮಟ್ಟಿಗೆ ಪದೇ ಪದೇ ಚಿತ್ರಿಸುತ್ತ

ಹೋಗುತ್ತಾರೆ. ಮರಂಕಿಯು ಮಹಾದೇವ ನಾಯಕನೊಡನೆ ಸುಖಿಸುವ ಸನ್ನಿವೇಶವನ್ನು ವಿವರಿಸುವಾಗ-ಕಿಲಾಡಿಯಾದ ನಾಯಕ ತನ್ನ ಅವ್ವನಿಗೆ ಎಚ್ಚರ ತಪ್ಪುವ ಹಾಗೆ ಹೆಂಡ ಕುಡಿಸಿರುತ್ತಾನೆ. ಆಕೆ ನಿದ್ರಾದೇವಿಯ ವಶವಾಗುತ್ತಾಳೆ. ಮರಂಕಿಯೂ ಮೂಗು ಮುಚ್ಚಿಕೊಂಡು ಗಟಗಟನೆ ಕುಡಿಯುತ್ತಾಳೆ. ಹೀಗೆ ಇಂತಹ ಸನ್ನಿವೇಶಗಳನ್ನು ನಿರ್ಮಾಣ ಮಾಡುವಾಗ ರಸವತ್ತಾಗಿ ಬರೆಯಲೇಬೇಕೆಂಬ ಮನೋಭಾವದಿಂದ ಬರೆಯುತ್ತಿದ್ದಾರೆ ಎಂಬ ಭಾವನೆಯು ಬರುತ್ತದೆ''[೧೧].

'ಭುಜಂಗಯ್ಯನ ದಶಾವತಾರಗಳು' ಕಾದಂಬರಿಯಲ್ಲಿನ ಭುಜಂಗಯ್ಯನ ವಿಭಿನ್ನ ಆಸಕ್ತಿಯ ವ್ಯಕ್ತಿತ್ವವನ್ನು ಕಾಣಬಹುದು. ಭುಜಂಗಯ್ಯ ಉತ್ತಮ ಬದುಕಿಗಾಗಿ ತನ್ನೆಲ್ಲ ಮಿತಿಗಳ ಸಮೇತ ಬದಲಾವಣೆಯನ್ನು ಬಯಸುವಂತಹವನೇ ಆಗಿದ್ದಾನೆ. ಈತ ಹೋಟೆಲನ್ನು ಮೊದಲು ಆರಂಭಿಸಲು ಮುಂದಾದಾಗ ಎಲ್ಲರೂ ಈತನನ್ನು ಹೀಯಾಳಿಸುತ್ತಾರೆ. ಆತನ ಮಾವ ಆರೇಳು ಹಳ್ಳಿಕಟ್ಟ ಯಜಮಾನನಾಗಿದ್ದು ತನ್ನ ಅಳಿಯ ಹೋಟೆಲಿಡುವುದು ದೊಡ್ಡ ಅಪರಾಧವಾಗುತ್ತದೆಯೆಂದು ಭಾವಿಸಿ ಸಿಟ್ಟಾಗುತ್ತಾನೆ. ಎಲ್ಲರ ವಿರೋಧದ ನಡುವೆಯೇ ಮಾದಳ್ಳಿಯಲ್ಲಿ ಹೋಟೆಲ್ ಇಡುತ್ತಾನೆ. ಶಿವಾಚಾರದವರಾಗಿ ಎಂಜಲು ತೊಳೆಯಬಾರದೆಂಬ ಅಳುಕು ಇದ್ದರೂ ಉತ್ತಮವಾಗಿ ಬದುಕಬೇಕಾದರೆ ಜಾತಿಯ ಕಟ್ಟುಕಟ್ಟಳೆಗಳನ್ನು ಮೀರುವುದು ಅನಿವಾರ್ಯ ಎಂಬ ಧ್ವನಿ ಇದೆ. ಭುಜಂಗಯ್ಯ ಹೋಟೆಲ್ ನಂತಹ ಹೊಸ ಉದ್ದಿಮೆಯಿಂದ ಮುಂದುವರೆದಿದ್ದು ಊರಿನ ಪ್ರತಿಷ್ಠತರಿಗೆ ಅಸೂಯಾಪರರಿಗೆ ಸಹಿಸಲಾರದ್ದಾಗಿರುತ್ತದೆ. ಈ ಶಕ್ತಿಗಳನ್ನು ನೇರವಾಗಿಯೇ ಎದುರಿಸುವ ಸಾಮರ್ಥ್ಯವನ್ನು ಈತ ನೈತಿಕವಾಗಿ ಪಡೆದಿದ್ದನು.

ಭುಜಂಗಯ್ಯನು ದೊಡ್ಡ ಮಠದ ಸ್ವಾಮಿಜಿಯ ಸಖ್ಯವನ್ನು ಬೆಳೆಸುವುದರ ಜೊತೆಗೆ, ಸಾಮಾನ್ಯರೊಡನೆಯೂ ಪ್ರೀತಿಯಿಂದ ಬೆರೆಯುವ ತನ್ನ ಸದ್ಗುಣದಿಂದಾಗಿ ಇಡೀ ಊರಿನ ಉಸಾಬರಿಯನ್ನೇ ಹೊತ್ತ ವ್ಯಕ್ತಿಯಾಗಿ ಕಂಡುಬರುತ್ತಾನೆ. ಹೀಗಾಗಿ ಬಳೆಶೆಟ್ಟರು, ತಂಬೂರಿ ಅಂದ್ನೋರು ಮುಂತಾದ ಹೊರಗಿನವರು ಸಹ ಈತನಿಗೆ ಆತ್ಮೀಯರೇ ಆಗುತ್ತಾರೆ. ಈ ಬಗೆಯ ಆತ್ಮೀಯತೆಯ ಮೂಲಕವೇ ಶೆಟ್ಟರಿಗೆ ಆಪ್ತನಾಗಿದ್ದ ಭುಜಂಗಯ್ಯ ಮೈಸೂರಿನಲ್ಲಿ ಸುಶೀಲ ಮತ್ತು ಶೆಟ್ಟರೊಡನೆ ನಾಟಕ ನೋಡಲು ಹೋಗಿದ್ದಾಗ-ಪಕ್ಕದಲ್ಲಿ ಕುಳಿತಿದ್ದ ಸುಶೀಲಳ ಮೈಗೆ ಮೈ ತಾಕಿ ಇಬ್ಬರೂ ತಮಗರಿವಿಲ್ಲದ ಸುಖವನ್ನು ಅನುಭವಿಸಿರುತ್ತಾರೆ. ಹೋಟೆಲ್ ಮಂಜನ ಮೂಲಕ ಭುಜಂಗಯ್ಯನ ಪತ್ನಿ ಪಾರ್ವತಿಗೆ ವಿಷಯ ತಿಳಿದು ಆಕೆಯು ಗಂಡ ಮತ್ತು ಸುಶೀಲರ ಬಗ್ಗೆ ಸಾಕ್ಷಾತ್ ರಣಚಂಡಿಯೇ ಆಗುತ್ತಾಳೆ. ಭುಜಂಗಯ್ಯನ ಏಳಿಗೆಯನ್ನು ಕಂಡರೆ

ಸಹಿಸಲಾಗದಿದ್ದವರಿಗಂತೂ ಈ ಪ್ರಕರಣ ಹೆಚ್ಚಿನ ಸಂತೋಷವನ್ನು ನೀಡುತ್ತದೆ. ಇದೆಲ್ಲದರಿಂದ ಬೇಸತ್ತ ಪಾರ್ವತಿಯು "ನಿಮ್ಗೇನು ಮಾನ ಮರ್ಯಾದೆ ಇಲ್ವಾ? ಇವ್ರು ಯಾವಳೊ ಗುಡಸೆಟ್ಟಿ ಜೊತೆ ವೋಟ್ಲಲ್ಲಿ ಚಕ್ಕಂದ ಆಡೋಕೆ"[೧೨] ಎಂದು ಪ್ರತಿಭಟಿಸುತ್ತಾಳೆ. ಕೋಪಗೊಂಡ ಭುಜಂಗಯ್ಯ ಪಾರ್ವತಿಗೆ ಸಾಯಬೀಳ ಹೊಡೆಯುತ್ತಾನೆ. ಆ ನೋವುಗಳನ್ನು ತಡೆದುಕೊಂಡು ರಂಪಮಾಡಿದ ಪಾರ್ವತಿ ಯಾವ ಪೂರ್ವಾಪರ ಆಲೋಚನೆಯನ್ನೂ ಮಾಡದೆ, ತನ್ನ ಮಕ್ಕಳೊಂದಿಗೆ ಅಪ್ಪನ ಮನೆಯನ್ನು ಸೇರುತ್ತಾಳೆ. ಇನ್ನು ಮುಂದೆ ಭುಜಂಗಯ್ಯನಿಗೆ ಈಕೆ ಹೊರಗಿನವಳಾಗಿಯೇ ಉಳಿಯುತ್ತಾಳೆ. ತನ್ನ ಗಂಡ ಕಷ್ಟದಲ್ಲಿದ್ದಾಗ ತನ್ನ ಮುಗ್ಧತೆಯಿಂದಲೇ ಧೈರ್ಯ ತುಂಬುವ ಈಕೆ ತನ್ನ ಅಸ್ತಿತ್ವಕ್ಕೆ ಕೊಡಲಿ ಪೆಟ್ಟು ಬಿದ್ದಾಗ ಅವಳು ಹೀಗೆ ಪ್ರತಿಭಟಿಸುವುದು ಸಹಜವಾಗಿದೆ.

ಮೊದಲೇ ಸುಶೀಲಳನ್ನು ನೋಡಿ ವಿಚಲಿತನಾಗಿದ್ದ ಭುಜಂಗಯ್ಯನು ಜಾತಿ, ವಯಸ್ಸು, ಅಂತಸ್ತು, ಹುಸಿ ಪ್ರತಿಷ್ಠೆಗಳನ್ನೆಲ್ಲ ಮೀರಿ ತಾನಾಗಿಯೇ ಒಲಿದು ಬಂದ ತಬ್ಬಲಿಯಾದ ಸುಶೀಲಳನ್ನು ಸಾಮಾಜಿಕ ಕಟ್ಟುಪಾಡುಗಳಿಗೂ ಅಂಜದೆ, ಧೈರ್ಯದಿಂದ ಕರೆತಂದು ಗದ್ದಿಗೆಯ ಮಠದಲ್ಲೇ ಮದುವೆಯಾಗುತ್ತಾನೆ. ಇದು ಅವನ ಹೃದಯವಂತಿಕೆ, ದಿಟ್ಟತನ ಮತ್ತು ಎಂದಿನ ಸಾಹಸಮನೋಭಾವವನ್ನು ಪ್ರಕಟಿಸುವ ಕೋಲಾಹಲಕಾರಿಯಾದ ಸಂಗತಿಯಾಗಿ ಪರಿಣಮಿಸುತ್ತದೆ. ಅಂತರಜಾತಿಯ ವಿವಾಹದಿಂದ ಹಳ್ಳಿಗಾಡಿನಲ್ಲಿ ಉಂಟಾಗುವ ಪರಿಣಾಮಗಳನ್ನೆಲ್ಲ ಸಹಜವಾಗಿ ಕಾದಂಬರಿಯಲ್ಲಿ ನಿರೂಪಿಸಿದ್ದಾರೆ. ಈ ವಿವಾಹವನ್ನು ವಿರೋಧಿಸಿದ ಎಲ್ಲರೂ, ರುದ್ರಪ್ಪ ಮತ್ತು ಸಣ್ಣಪ್ಪನವರು ವೀರಶೈವ ಮಹಾಸಭೆ ಸೇರಿ ತಮ್ಮ ಮನೋವಿಕಾರಕ್ಕೆ ತಕ್ಕಂತೆ, ಭುಜಂಗಯ್ಯನ ಮಾವ ಪರ್ವತಪ್ಪನನ್ನು ಬಳಸಿಕೊಂಡು ಪಂಚಾಯ್ತಿ ನಡೆಸಿ "ನೋಡು ಭುಜಂಗಯ್ಯ ಬೆಳಗಾನ ಮಾತಾಡಿದ್ರು ಅಷ್ಟೆ ನಮ್ದು ಕಡೆ ಮಾತಿಷ್ಟೆ–ಏನೋ ಆಗೋದು ಆಗೋಯ್ತು. ನಮ್ಮ ಕುಲಕ್ಕೆ ಮಸಿಬಳ್ದಂಗೆ ಅವಳ್ಯಾವ ಸುಡುಗಾಡು ಜಾತಿಯವ್ಳೋ ಕೂಡ್ಕಂಡೆ–ಕುಲದ ಸಭೆ ಅಂದ್ರೆ ದೇವರಿದ್ದಂಗೆ, ಅವರ್ಗೆಲ್ಲ ಕೈ ಮುಗ್ದು ತಪ್ಪಾಯ್ತು ಅಂದ್ಬುಟ್ಟು, ನಾಳಿಕೆ ವೊತ್ತು ಮುಳ್ಗೋದ್ರಲ್ಲಿ ಅವಳ್ನ ಬುಟ್ಬುಡ್ತೀನಿ ಅಂತ ಹೇಳು. ಇಲ್ಲಾಂದ್ರೆ ಮುಂದೇನ್ಮಾಡ್ಬೇಕೊ ಮಾಡ್ತೀವಿ"[೧೩] ಎಂದರು. ಆದರೆ ಭುಜಂಗಯ್ಯ ಇದಕ್ಕೆ ಒಪ್ಪುವುದಿಲ್ಲ. ರುದ್ರಪ್ಪ ಮತ್ತು ಭುಜಂಗಯ್ಯನ ನಡುವೆ ಜಗಳವಾಗುತ್ತದೆ. ಇದರ ಪರಿಣಾಮವಾಗಿ ಊರಿಗೆ ಪೊಲೀಸರ ಪ್ರವೇಶವಾಗುತ್ತದೆ. ಈ ಎಲ್ಲ ಘಟನೆಗಳ ನಂತರವು ಸುಶೀಲಳಿಗೆ ದೇವನೂರ ದೊಡ್ಡಮಠದ ಮಹಾಸ್ವಾಮಿಗಳ ಅಮೃತ ಹಸ್ತದಿಂದಲೇ ಭುಜಂಗಯ್ಯ ಶಾಸ್ತ್ರೋಕ್ತವಾಗಿ

ಲಿಂಗಧಾರಣೆ ಮಾಡಿಸುತ್ತಾನೆ. ಇದರಿಂದ ಭುಜಂಗಯ್ಯನ ವಿರೋಧಿಗಳಿಗೆ ನಿರಾಸೆ, ಆಕ್ರೋಶ, ಕ್ರೋಧಗಳು ಇಮ್ಮಡಿಸುತ್ತವೆ.

ವಾಸ್ತವವಾಗಿ ಜಡ್ಡುಗಟ್ಟಿದ ಈ ಜಾತಿವ್ಯವಸ್ಥೆಯ ನಡುವೆ ಸಾರ್ವಜನಿಕ ಸ್ಥಳಗಳು, ಹೋಟೆಲುಗಳು, ಶಾಲೆಗಳು, ವಾಹನಗಳು-ಮುಂತಾದವುಗಲೆಲ್ಲ ಈ ಪದ್ಧತಿಯನ್ನು ಸಡಿಲಗೊಳಿಸಲು ನೆರವಾಗುತ್ತವೆ. ಸುತ್ತಮುತ್ತಲಿನ ಊರಿಗೆಲ್ಲ ಕಂತ್ರಾಟುದಾರನಾಗಿ ಕೆಲಸ ಮಾಡುತ್ತಿದ್ದ ಇವನು ಮಳೆಗಾಲ ಬರುವ ವೇಳೆ ಎಲ್ಲವನ್ನು ಮುಗಿಸಬೇಕೆಂದು, ಶ್ರಮವಹಿಸಿ ದುಡಿದು ಸುಶೀಲೆಯೊಂದಿಗೆ ಬಾಳುವೆ ಮಾಡುತ್ತಿರುವಾಗಲೇ ತೀರ ಆಕಸ್ಮಿಕವಾಗಿ ಡೈನೊಮೊ ಸಿಡಿದು ಕಣ್ಣು ಕಳೆದುಕೊಂಡ ನಂತರ ಇವನ ಜೀವನದ ಗತಿಗಳೇ ಬದಲಾಗಿ, ಮುಂದೆ ಇದೆಲ್ಲವೂ ಶಿವನಲೀಲೆ ಎಂದು ಭಾವಿಸಿ ಆಧ್ಯಾತ್ಮಿಕ ಜೀವನವನ್ನು ಬದುಕುತ್ತಾನೆ. ಈ ಹಂತದಲ್ಲಿ ಸುಶೀಲೆಯ ಬದುಕು ದುರಂತವೆನಿಸುತ್ತದೆ. ತಬ್ಬಲಿಯಾಗಿ ಮಲತಾಯಿಯ ನೆರಳಿನಲ್ಲಿ ಬೆಳೆದು, ಭುಜಂಗಯ್ಯನನ್ನು ಮದುವೆಯಾದದ್ದರಿಂದ ತಂದೆಯಿಂದಲೂ ದೂರವಾಗುಳಿಯುತ್ತಾಳೆ. ಎಷ್ಟೇ ಹೊಂದಿಕೊಂಡು ಹೋಗುವವಳಾದರೂ ಮಾದಳ್ಳಿಯ ಪಾಲಿಗೆ 'ಇಟ್ಟುಕೊಂಡವಳ' ಹಣೆಪಟ್ಟಿಯನ್ನು ಹಚ್ಚಿಕೊಂಡು, ಕುರುಡು ಗಂಡನನ್ನು ತಾನೇ ಸಾಕುತ್ತ ಬಾಳುವೆಯನ್ನು ಮಾಡುವ ಸುಶೀಲಳ ಜೀವನ ದುರಂತವೆನಿಸುತ್ತದೆ.

ಕಾದಂಬರಿಯ ಅಂತಿಮ ಘಟ್ಟದಲ್ಲಿ, ಬಳೆಯನ್ನು ಮಾರಿ ಹಿಂದಿರುಗುತ್ತಿದ್ದ ಸುಶೀಲಳನ್ನು ಮಬ್ಬುಗತ್ತಲಲ್ಲಿ ನಾರಾಯಣನು ಅಡ್ಡಗಟ್ಟಿ, ಅತ್ಯಾಚಾರ ನಡೆಸುತ್ತಾನೆ. 'ಕರೀಗೌಡನು ಮತ್ತು ಕಾಳವ್ವರಂತಹ ದೇವರ ಸಮಾನರಾದ ಮನುಷ್ಯರಿಗೆ ಇಂತಹ ಮನೋವಿಕಾರದ ಮಗನಿರುತ್ತಾನೆಂಬುದೇ ವಿಷಾದದ ಸಂಗತಿ. ಭುಜಂಗಯ್ಯ ಕೊನೆಗೆ ಸಂಪೂರ್ಣ ಆಧ್ಯಾತ್ಮಿಕ ಬದುಕನ್ನು ಸ್ವೀಕರಿಸುತ್ತಾನೆ. ನಾರಾಯಣ ಸುಶೀಲಳನ್ನು ಕೆಡಿಸಿದ ವಿಷಯ ಗೊತ್ತಾದರೂ, ಶಿವನು ಭಕ್ತನನ್ನು ಪರೀಕ್ಷಿಸುತ್ತಿದ್ದಾನೆಂದೆ ಭಾವಿಸಿ ಅಲೌಕಿಕತೆಯ ಧಾಟಿಯಲ್ಲೇ ನಕ್ಕು ಸುಮ್ಮನಾಗುತ್ತಾನೆ. ತನ್ನ ಹೆಂಡತಿಯ ಮೇಲೆ ಆಕ್ರಮಣ ನಡೆಸಿ ತನ್ನ ವ್ಯಕ್ತಿತ್ವವನ್ನೇ ಅಲುಗಾಡಿಸಿದ ನೀಚ ನಾರಾಯಣನನ್ನು ಹಾವು ಕಚ್ಚಿದಾಗ ಅವನಲ್ಲಿದ್ದ ವಿಷವನ್ನು ಹೀರಿ ಹೊರ ತೆಗೆದು ಔಷಧಿಯನ್ನು ಕೊಟ್ಟು ಬದುಕಿಸುತ್ತಾನೆ. ಸೋರೆ ಬುರುಡೆಯಲ್ಲಿ ಔಷಧಿಯ ಸೊಪ್ಪಿನ ಪುಡಿಯು ಕಡಿಮೆ ಇರುವುದು ಭುಜಂಗಯ್ಯನಿಗೆ ಗೊತ್ತಿರುತ್ತದೆ. ಆದರೆ ಇದು ಶಿವನ ಲೀಲೆಯೆಂದೇ ಭಾವಿಸುತ್ತಾನೆ. ಸುಶೀಲ ಎಷ್ಟೇ ತ್ಯಾಗಮಯಿಯಾಗಿ, ಮಾನವೀಯವಾಗಿ ನಡೆದುಕೊಂಡರೂ ಊರಿನವರ ಪಾಲಿಗೆ ಭುಜಂಗಯ್ಯ ಇಟ್ಟುಕೊಂಡವಳೆ ಆಗಿರುತ್ತಾಳೆ.

ಸುಶೀಲಳಿಗೆ ಆಂತರ್ಯದಲ್ಲಿ ಈ ಎಲ್ಲ ಒಳನೋವುಗಳು ಇವೆ. ಇಲ್ಲಿ ಭುಜಂಗಯ್ಯ ಅಬಲೆಯಾದ ತನ್ನ ಹೆಂಡತಿ ಸುಶೀಲಳ ಮುಂದಿನ ಜೀವಿತದ ಬಗ್ಗೆ ಸ್ವಲ್ಪವೂ ಯೋಚಿಸದೆ ತಾನೆ ಸಾವನ್ನಪ್ಪುವುದು ವಿಷಾದವೆನಿಸುತ್ತದೆ.

ಮೂರು ಕಾದಂಬರಿಗಳಲ್ಲೂ ಲೈಂಗಿಕ ವಿಚಾರಗಳಲ್ಲಿ ಜಾತಿ, ವಯಸ್ಸು, ಅಂತಸ್ತು ಮಡಿವಂತಿಕೆಗಳನ್ನು ತೊರೆದು ಒಲಿದವರೊಡನೆ ಸಂಬಂಧವನ್ನಿಟ್ಟುಕೊಳ್ಳುವ ವ್ಯಕ್ತಿಗಳ ಚಿತ್ರಣಗಳು ಕಂಡುಬರುತ್ತವೆ. 'ಕಾಡು' ಕಾದಂಬರಿಯಲ್ಲಿ ಬರುವ ಹೊಲೆಯರ ಕಾಳಿ ಮತ್ತು ಗುಡಿ ಅಯ್ನೋರ ಸಂಬಂಧ, ಚಂದ್ರೇಗೌಡ–ಬಸಕ್ಕನ ಸಂಬಂಧ, ನಾಗಿಯ ಚಿಕ್ಕವ್ವ ಕಲ್ಯಾಣಿಯು ಹೊಲೇರ ಹನುಮನೊಡನೆ ಓಡಿಹೋದದ್ದು ಮುಂತಾದ ವಿವರಗಳು ಬಂದರೆ, 'ಗೆಂಡೆತಿಮ್ಮ' ಕಾದಂಬರಿಯಲ್ಲಿ ಮರಂಕಿ ಮತ್ತು ಶಿವಣ್ಣರ ಸಂಬಂಧ ಕಂಡುಬರುತ್ತದೆ. 'ಭುಜಂಗಯ್ಯನ ದಶಾವತಾರಗಳು' ಕಾದಂಬರಿಯಲ್ಲಿ ಶ್ಯಾನುಭೋಗ ಗುಂಡಪ್ಪ ಮತ್ತು ಕಾಳಿಯ ಸಂಬಂಧ ಸಣ್ಣವರು, ದೊಡ್ಡವರು, ಮುದುಕರು, ವೋಟರು ಎನ್ನದೆ ಎಲ್ಲರೊಡನೆ ಹಾದರತನ ಮಾಡುವ ಪುಟ್ಟ ಬಸವಿಯ ಪಾತ್ರ ಕಂಡುಬರುತ್ತದೆ. ಈ ಮೂರು ಕಾದಂಬರಿಗಳಲ್ಲಿ ಹಾಸ್ಯ, ಹರಟೆ, ಪೋಲಿ ಮಾತುಗಳು ಯಥೇಚ್ಚವಾಗಿವೆ. 'ಕಾಡು' ಕಾದಂಬರಿಯಲ್ಲಿ ತೀರ ವಿರಳ ಎನ್ನುವ ಮಟ್ಟಿಗೆ, ಅರ್ಥಪೂರ್ಣವಾಗಿ ಬಂದರೆ, 'ಪರಸಂಗದ ಗೆಂಡೆತಿಮ್ಮ' ಮತ್ತು 'ಭುಜಂಗಯ್ಯನ ದಶಾವತಾರಗಳು' ಕಾದಂಬರಿಯಲ್ಲಿ ಹೆಚ್ಚಿನ ಮಟ್ಟದಲ್ಲಿ ಬರುತ್ತದೆ. 'ಗೆಂಡೆತಿಮ್ಮ' ದಲ್ಲಿ ಕಾಳ, ಬೆಟ್ಟ, ಪಿಲ್ಲಿ ಮುಂತಾದವರು ಊರಿನ ಹಾಗುಹೋಗುಗಳನ್ನು ಕುರಿತು ಚಾವಡಿಯಲ್ಲಿ ಹರಟೆ ಹೊಡೆದರೆ 'ಭುಜಂಗಯ್ಯನ ದಶಾವತಾರಗಳು' ಕೃತಿಯಲ್ಲಿ ಪುಂಡ್ರಿ ಎಂಬ ಹಾಸ್ಯಗಾರ ಮಾದಳ್ಳಿಯಲ್ಲಿ ನಡೆಯುವ ಎಲ್ಲ ಆಗುಹೋಗುಗಳೆಲ್ಲವನ್ನು ಗ್ರಹಿಸಿ ತನ್ನದೇ ಆದ ರೀತಿಯ ತಿಳಿಹಾಸ್ಯದಲ್ಲಿ ಮಾತಾಡುವುದು ಕಂಡುಬರುತ್ತದೆ. ಮೂರು ಕಾದಂಬರಿಗಳು ಸಹಾ ದುರಂತದಲ್ಲೇ ಅಂತ್ಯಗೊಳ್ಳುತ್ತವೆ.

## ಅಡಿ ಟಿಪ್ಪಣಿಗಳು:

೧. ಆಲನಹಳ್ಳಿ ಸಣ್ಣ ಕತೆಗಳು: ಶ್ರೀಕೃಷ್ಣ ಆಲನಹಳ್ಳಿ; ಪು. ೬೫-೬೬; ೧೯೮೬

೨. ಸಮಕ್ಷಮ: ಯು. ಆರ್. ಅನಂತಮೂರ್ತಿ; ಪು. ೧೫೭-೧೫೮; ೧೯೮೦

೩. ಆಲನಹಳ್ಳಿ ಸಣ್ಣ ಕತೆಗಳು: ಶ್ರೀಕೃಷ್ಣ ಆಲನಹಳ್ಳಿ; ಪು. ೯೪; ೧೯೮೬

೪. ಅದೇ ; ಪು. ೪೬

೫. ಅದೇ ; ಪು. ೧೦೨

೬. ಶ್ರೀಕೃಷ್ಣ ಆಲನಹಳ್ಳಿ ಯವರ ಸಾಹಿತ್ಯ: ಎಂ. ಎಸ್. ಶೇಖರ್ ; ಪು. ೧೨೦; ೨೦೦೨

೭. ಕಾಡು: ಶ್ರೀಕೃಷ್ಣ ಆಲನಹಳ್ಳಿ; ಪು. ೫೨; ೧೯೮೮

೮. ಅದೇ ಪು. ೯೪

೯. ಪರಸಂಗದ ಗೆಂಡೆತಿಮ್ಮ; ಶ್ರೀಕೃಷ್ಣ ಆಲನಹಳ್ಳಿ; ಪು. ೩೧; ೧೯೭೪

೧೦. ಅದೇ ಪು. ೫೨

೧೧. ಶ್ರೀಕೃಷ್ಣ ಆಲನಹಳ್ಳಿ ಯವರ ಸಾಹಿತ್ಯ: ಎಂ.ಎಸ್. ಶೇಖರ್; ಪು. ೧೬೦; ೨೦೦೨

೧೨. ಭುಜಂಗಯ್ಯನ ದಶಾವತಾರಗಳು: ಶ್ರೀಕೃಷ್ಣ ಆಲನಹಳ್ಳಿ; ಪು. ೨೧೬; ೧೯೮೩

೧೩. ಅದೇ ; ಪು. ೨೬೧

ಆಲನಹಳ್ಳಿಯವರು ಕವಿತೆಯನ್ನು ಬರೆಯುವ ಮೂಲಕ ಕನ್ನಡ ಸಾಹಿತ್ಯವನ್ನು ಪ್ರವೇಶಿಸಿದರು. ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲೂ ಆಸಕ್ತರಾಗಿದ್ದ ಇವರು ಕಥೆ, ಕಾದಂಬರಿ ಕ್ಷೇತ್ರಗಳಲ್ಲಿಯೂ ತೀವ್ರವಾದ ಆಸಕ್ತಿಯಿಂದ ದುಡಿದಿದ್ದಾರೆ. ಇವರು ಕಥೆಗಳನ್ನು ಬರೆಯಲು ತೊಡಗಿದ್ದು ೧೯೬೬-೬೭ ಸುಮಾರಿಗೆ.

ಆಲನಹಳ್ಳಿಯವರು ಕಥೆಗಳನ್ನು ಬರೆಯುವ ಕಾಲಕ್ಕಾಗಲೇ ಕನ್ನಡದಲ್ಲಿ ಈ ಪ್ರಕಾರ ತುಂಬಾ ಹುಲುಸಾಗಿ ಬೆಳೆದಿತ್ತು. ಪ್ರಾತಿನಿಧಿಕವಾಗಿ ಗುರುತಿಸುವುದಾದರೆ. ಮಾಸ್ತಿ, ಕುವೆಂಪು, ಆನಂದ, ಅಶ್ವತ್ಥ ಮುಂತಾದ ನವೋದಯ ಕಥೆಗಾರರು ಈ ಕ್ಷೇತ್ರಕ್ಕೆ ತಮ್ಮದೇ ಆದ ಕೊಡುಗೆ ನೀಡಿದ್ದರು. ತ.ರಾ.ಸು, ನಿರಂಜನ, ಚದುರಂಗ, ಬಸವರಾಜ ಕಟ್ಟೀಮನಿ ಮುಂತಾದ ಪ್ರಗತಿಶೀಲ ಕಥೆಗಾರರು ಸಾಮಾಜಿಕ ಕಳಕಳಿಯನ್ನು ಒಳಗೊಂಡು ಈ ಕ್ಷೇತ್ರವನ್ನು ಇನ್ನಷ್ಟು ವಿಸ್ತರಿಸಿದ್ದರು. ಈ ಎರಡು ಪಂಥಗಳ ದೃಷ್ಟಿ ಧೋರಣೆಗಳನ್ನು ಮೀರಿ ವಸ್ತು, ಭಾಷೆ, ತಂತ್ರ, ನಿರೂಪಣೆ ಮುಂತಾದ ಹಲವು ದೃಷ್ಟಿಗಳಿಂದ ಹೊಚ್ಚ ಹೊಸ ರೀತಿಯಲ್ಲಿ ಎಂಬಂತೆ ನವ್ಯ ಕಥೆಗಾರರಾದ ಅನಂತಮೂರ್ತಿ, ಶಾಂತಿನಾಥ ದೇಸಾಯಿ, ಯಶವಂತ ಚಿತ್ತಾಲ, ಲಂಕೇಶ್, ಪೂರ್ಣಚಂದ್ರ ತೇಜಸ್ವಿ, ಟಿ.ಜಿ. ರಾಘವ, ಕೆ. ಸದಾಶಿವ ಮುಂತಾದವರು ಮನುಷ್ಯನ ಮನಸ್ಸು ಮತ್ತು ಮೂಲ ಪ್ರವೃತ್ತಿಗಳ ಕಡೆ ಗಮನ ಹರಿಸಿದರು. ಸಮಾಜವಾದದಿಂದ ಪ್ರೇರಿತರಾಗಿದ್ದ ಕೆಲವು ನವ್ಯ ಕಥೆಗಾರರು ನವ್ಯದ ಮೂಲ ಸೆಲೆಯನ್ನೇ ಪ್ರಶ್ನಿಸುತ್ತ ಹೊಸ ದೃಷ್ಟಿಕೋನಗಳಿಂದ ಕಥಾ ಸಾಹಿತ್ಯವನ್ನು ರಚಿಸುತ್ತಿದ್ದರು. ಆಲನಹಳ್ಳಿಯವರು ಕಥೆಗಳನ್ನು ಬರೆಯುವ ಕಾಲಕ್ಕೆ ಈ ಎಲ್ಲ ಪಂಥಗಳ ಸಾಹಿತ್ಯ ಅವರ ಕಣ್ಣಮುಂದೆ ಇದ್ದವು. ಮೇಲಿನ ಪ್ರಮುಖ ಬರಹಗಾರರ ಸಾಹಿತ್ಯವನ್ನೆಲ್ಲ ಗಂಭೀರವಾಗಿ ಅಧ್ಯಯನ ಮಾಡಿ ಅದರ ಮಹತ್ವವನ್ನು ಇತಿಮಿತಿಗಳ ಜೊತೆಗೆ ಬಲ್ಲವರಾಗಿದ್ದರು.

ಅನಂತರ ಬಂದ ಒಟ್ಟು ಜನ ಸಮುದಾಯದ ಆಶೋತ್ತರಗಳನ್ನು ಪ್ರತಿಬಿಂಬಿಸುವ ಹಠದ ದಲಿತ-ಬಂಡಾಯ ಸಾಹಿತ್ಯ ಚಳುವಳಿಗಳು ಹುಟ್ಟಿ ಬೆಳೆಯುವ ಕಾಲದಲ್ಲಿಯೂ ಆಲನಹಳ್ಳಿಯವರು ಸಾಹಿತ್ಯ ಕೃಷಿಯಲ್ಲಿ ತೊಡಗಿದ್ದರು. ಬಹುಪಾಲು ದಲಿತ ಬಂಡಾಯ ಸಾಹಿತ್ಯದ ಪ್ರಮುಖ ಬರಹಗಾರರೆಲ್ಲರೂ ಇವರ ಆಪ್ತರೇ ಆಗಿದ್ದರು. ಈ ಹಿನ್ನೆಲೆಯಲ್ಲಿ ಆಲನಹಳ್ಳಿಯವರು ಏನೇ ವಿಶಿಷ್ಟತೆಯನ್ನು ಉಳಿಸಿಕೊಳ್ಳಲು ಪ್ರಯತ್ನಿಸಿದರೂ ಇವೆಲ್ಲವುಗಳ ಪ್ರಭಾವ ಒಂದಲ್ಲ ಒಂದು ರೀತಿಯಲ್ಲಿ ಇವರ ಕತೆಗಳ ಮೇಲೆ ಇದ್ದೇ ಇದೆ. ಆದರೆ ಒಬ್ಬ ಪ್ರತಿಭಾವಂತ ಬರಹಗಾರ ಮಹತ್ವದ ಚಳುವಳಿ ಹಾಗೂ ಲೇಖಕರಿಂದ ಪ್ರಭಾವಿತನಾಗಿಯೂ

ತನ್ನ ವೈಯಕ್ತಿಕ ಛಾಪಿನಿಂದ ಹೇಗೆ ಭಿನ್ನನಾಗುತ್ತಾನೆಂಬುದು ಅತ್ಯಂತ ಪ್ರಮುಖವೆನಿಸುತ್ತದೆ. ಆಲನಹಳ್ಳಿಯವರಿಗೆ ಸಕಲ ವಿಷಯುಗಳು ಬೇಕಾದವುಗಳೆ. ಯಾವುದು ಇವರನ್ನು ತೀವ್ರವಾಗಿ ಕಾಡುತ್ತದೋ, ತಟ್ಟುತ್ತದೋ, ಅದನ್ನು ಅರಗಿಸಿಕೊಂಡು ತಮ್ಮ ಸೃಜನಶೀಲ ಚೈತನ್ಯದಿಂದ ಕಂಗೊಳಿಸುವಂತಹ ಬರಹಗಳನ್ನು ಸೃಷ್ಟಿಸುತ್ತಿದ್ದ ಅವರು ತಮ್ಮ ಸಮಕಾಲೀನ ಕಥೆಗಾರರಿಗಿಂತ ಭಿನ್ನವಾಗಿಯೇ ಉಳಿಯುತ್ತಾರೆ. ಇಷ್ಟಾದರೂ ಇವರ ಪ್ರಾರಂಭದ ಕೆಲವು ಕಥೆಗಳು ನವ್ಯ ಕಥೆಗಳ ಸಾಲಿನಲ್ಲಿ ನಿಲ್ಲುವಂತಹವುಗಳಾಗಿವೆ.

ಶ್ರೀ ಕೃಷ್ಣ ಅವರ ಕಥೆಗಳಲ್ಲಿ ಹೆಚ್ಚಿನವು ಈ ಲೇಖಕರು ತಮ್ಮ ಬಾಲ್ಯದಲ್ಲಿ ಕಂಡುಂಡ ಗ್ರಾಮೀಣ ಬದುಕಿನ ದಟ್ಟವಾದ ಚಿತ್ರಣವನ್ನೇ ಕಲಾತ್ಮಕವಾಗಿ ನೀಡಿರುವುದನ್ನು ಗಮನಿಸಬಹುದು. ಹಾಗೆಯೇ ನಗರ ಹಾಗೂ ಗ್ರಾಮೀಣ ಬದುಕಿನ ವಿವರಗಳನ್ನು ಸಮಸ್ಥಿತಿಯಲ್ಲಿ ಹಿಡಿದಿಟ್ಟಿರುವುದನ್ನು ಕೆಲವು ಕಡೆಗಳಲ್ಲಿ ಕಾಣುತ್ತೇವೆ. ಆದರೆ ಇವರ ಶ್ರೇಷ್ಠ ಕಥೆಗಳೆಲ್ಲವೂ ದಟ್ಟವಾದ ಗ್ರಾಮೀಣ ಬದುಕಿನ ವಿವರಗಳು ಹಾಗೂ ಇವರ ಬಾಲ್ಯದಲ್ಲಿ ಕಂಡುಂಡ ಘಟನೆಗಳನ್ನು ಸುತ್ತುವರಿದವುಗಳೇ ಆಗಿವೆ. ಈ ಸಾಲಿಗೆ 'ಆಗಂತುಕ','ಸಂಬಂಧ', ಮುಂತಾದ ಕಥೆಗಳು ಸೇರುತ್ತವೆ. ಇವರ ಬಹುಪಾಲು ಕಥೆಗಳಲ್ಲಿ ಕಾಮವೇ ಪ್ರಧಾನ ಸೆಳೆತವಾಗಿ ಬರುತ್ತದೆ. ಈ ಸಂಬಂಧದಲ್ಲೆ ಬದುಕಿನ ವಿವಿಧ ಪರಿಗಳನ್ನು ಸಮಸ್ಯೆಗಳನ್ನು ಇದರಲ್ಲಡಗಿರುವ ಸಂಕೀರ್ಣತೆಯನ್ನು ವಿವರಿಸಲು ಪ್ರಯತ್ನಿಸುತ್ತಾರೆ. ಇದರ ಸುತ್ತಮುತ್ತವೆ ಹರಡಿಕೊಂಡಿರುವ ಇವರ ಕಥೆಗಳು ಪ್ರೀತಿ, ಪ್ರೇಮ, ಸರಸ, ವಿರಸ, ದಾಂಪತ್ಯ ಮುಂತಾದ ವಿವರಗಳ ಹಿನ್ನೆಲೆಯಲ್ಲಿ ಮಾನವ ಸಂಬಂಧಗಳನ್ನು ಗುರುತಿಸುತ್ತಾ ಹೋಗುತ್ತವೆ. ಹಾಗಾಗಿ ಇವರ ಕಥೆಗಳಲ್ಲಿ ಸಹಜವಾಗಿಯೇ ಜೀವನದ ಉತ್ಕರ್ಷತೆಯ ಸೆಳೆತ ಕಂಡುಬಂದು ಯುವ ಮನಸ್ಸುಗಳ ಆಸೆ, ನಿರಾಸೆ, ತುಮುಲಗಳು ತುಂಬಿಕೊಳ್ಳುತ್ತವೆ.

ಸಮಾಜವಾದದಿಂದ ಪ್ರಭಾವಿತರಾಗಿದ್ದ ಶ್ರೀ ಕೃಷ್ಣ ಅವರು ಸ್ವತಃ ಬಡತನದ ನೋವು ಮತ್ತು ಸಮಾಜದ ಅಸಮಾನತೆಗಳನ್ನು ಬಲ್ಲವರಾದ್ದರಿಂದ, ಆ ಎಲ್ಲ ತುಡಿತಗಳೂ ಸಹ ಅವರ ಈ ಕಥೆಗಳಲ್ಲಿ ಸ್ವಲ್ಪಮಟ್ಟಿಗಾದರೂ ಕೆಲಸ ಮಾಡಿವೆ. ಅರ್ಥವಿಲ್ಲದ ಜಾತಿ, ಕುರುಡು ಸಂಪ್ರದಾಯಗಳಿಂದ ಆಗುವ ಅನ್ಯಾಯಗಳ ಬಗ್ಗೆ ಕೆಲವು ಕಥೆಗಳಲ್ಲಿ ನೇರವಾಗಿ ಪ್ರಸ್ತಾಪಿಸಿ ಅವುಗಳನ್ನು ದಾಟಿ ಬದುಕನ್ನು ಹುಡುಕುವ ಪ್ರಯತ್ನವೂ ಕೂಡ ಇದೆ.

ಈ ಎಲ್ಲಾ ಹಿನ್ನೆಲೆಗಳಲ್ಲಿ 'ಹಳತು ಮತ್ತು ಹೊಸತುಗಳ ನಡುವಿನ ಸಂಘರ್ಷ' ಇವರ ಬಹುಪಾಲು ಕಥೆಗಳಲ್ಲಿ ಕಂಡುಬರುತ್ತವೆ. ಹಾಗಾಗಿ ಇವರ ಕಥಾನಾಯಕನು ತಮ್ಮ ನೈತಿಕ ಹೊಣೆಗಾರಿಕೆಯಿಂದ ಸಂಪೂರ್ಣವಾಗಿ ಹಳೆಯದನ್ನು ತಿರಸ್ಕರಿಸಲಾಗದ, ಹೊಸದನ್ನು ಸಂಪೂರ್ಣ ಒಪ್ಪಲಾಗದ ಇಕ್ಕಟ್ಟಿಗೆ ಸಿಕ್ಕಿ ಯಾತನೆಯನ್ನು ಅನುಭವಿಸುವವರಾಗಿದ್ದಾರೆ. ಈ ರೀತಿಯ ದುರ್ಬಲ ಕಥಾನಾಯಕರುಗಳನ್ನು ಸೃಷ್ಟಿಸುವ ತಂತ್ರ ಆಲನಹಳ್ಳಿಯವರಿಗೆ ನವ್ಯರಿಂದ ಸಿಕ್ಕಿರಬಹುದೆನಿಸುತ್ತದೆ.

ಆಲನಹಳ್ಳಿಯವರು ಯಾವುದೇ ವಸ್ತುವನ್ನು ಕಥೆಗೆ ಆರಿಸಿಕೊಂಡರೂ ಅದನ್ನು ಅದ್ಭುತವಾಗಿ ಕಥೆಯನ್ನಾಗಿಸುವ ವಿಶಿಷ್ಟ ಶಕ್ತಿಯನ್ನು ಪಡೆದಿದ್ದಾರೆ. ಯಾವುದೇ ಒಂದು ಸನ್ನಿವೇಶವನ್ನು ಕಟ್ಟಿಕೊಡುವ ಸಂದರ್ಭದಲ್ಲಿ ಭಾಷೆಯ ಎಲ್ಲಾ ಸಾರವನ್ನು, ಕಸುವನ್ನು ಹೀರಿಕೊಂಡು, ಅವರು ಹೇಳುವುದನ್ನು ಅಚ್ಚುಕಟ್ಟಾದ ಕಥಾಶಿಲ್ಪಕ್ಕೆ ಅಳವಡಿಸುತ್ತಾರೆ. ಈ ದೃಷ್ಟಿಯಿಂದ ಇವರ ಕಥೆಗಳನ್ನು ಕುರಿತಂತೆ ಜಿ.ಎಚ್. ನಾಯಕರು "ಶ್ರೀ ಕೃಷ್ಣ ಆಲನಹಳ್ಳಿಯವರ ಕಥೆಗಳಲ್ಲಿ ಜೀವನದ ಬಗೆಗೆ ಉಕ್ಕುವ ಪ್ರೀತಿಯಿದೆ. ಅವರ ತಲೆಮಾರಿನವರು, ಜೀವನಾನುಭವಗಳಿಗೆ, ತಮ್ಮನ್ನು ಮುಕ್ತವಾಗಿ ಒಪ್ಪಿಕೊಳ್ಳುವುದರ ಬಗೆಗೆ ವಿಶಿಷ್ಟವಾದ ಸಂಕೋಚವನ್ನು ಬೆಳೆಸಿಕೊಂಡು ಏಕ್‌ದಂ ಪಕ್ವತೆಯ ಪೋಸು ಕೊಡುತ್ತಿರುವ ಈ ದಿನಗಳಲ್ಲಿ ಅವರ ಜೀವನ ಪ್ರೀತಿ ಮಹತ್ವದ ಗುಣವಾಗಿ ಕಾಣಿಸುತ್ತದೆ. ಎರಡನೆಯದಾಗಿ ಹೊಚ್ಚ ಹೊಸತೆಂಬಂತಹ ರೀತಿಯ ಜೀವನಾನುಭವ ಅವರ ಕಥೆಗಳ ಮೂಲಕ ಧ್ವನಿಸುವುದಿಲ್ಲವಾದರೂ ಅವರ ಸಣ್ಣ ಕಥೆಗಳ ಮೂಲಕ ಹೇಳಬೇಕಾದದ್ದನ್ನು ಅಚ್ಚುಕಟ್ಟಾದ ಶಿಲ್ಪಕ್ಕೆ ಅಳವಡಿಸುವ ಬಗೆ ಮನಸೆಳೆಯುವಂತಿರುತ್ತದೆ"[9] ಎಂಬ ಮಾತುಗಳು ಆಲನಹಳ್ಳಿಯವರ ಕಥೆಗಳಿಗೆ ಚೆನ್ನಾಗಿ ಅನ್ವಯಿಸುತ್ತದೆ.

'ತಪ್ತ' ಸಂಕನದಲ್ಲಿ ಎಂಟು ಕಥೆಗಳಿವೆ. ಈ ಕಥಾ ಸಂಕಲನದ ಹಲವು ಕಥೆಗಳು ನವ್ಯ ಕಥೆಗಳ ಸಾಲಿನಲ್ಲಿ ನಿಲ್ಲುವ ಯೋಗ್ಯತೆ ಗಳಿಸಿವೆ. ಈ ಎಲ್ಲ ಕಥೆಗಳಲ್ಲಿ ಬರುವ ಕಥಾನಾಯಕರು ತಮ್ಮ ಬದುಕನ್ನು ವಿವಿಧ ದಿಕ್ಕಿನಲ್ಲಿ ರೂಪಿಸಿಕೊಳ್ಳಲೆತ್ನಿಸುತ್ತ, ವೈಚಾರಿಕ ದೃಷ್ಟಿಯಿಂದ ಬದುಕಲು ಹವಣಿಸುತ್ತಾರೆ. ಹೊಸ ಬದುಕಿನ ಬಗೆಗಿನ ತುಡಿತ ಮತ್ತು ತನ್ನ ಕರುಳಬಳ್ಳಿಗಳ ಸಂಬಂಧ ಇವೆರಡರ ನಡುವೆ ಸಂಘರ್ಷವೇರ್ಪಡುತ್ತದೆ. ಇವುಗಳ ನಡುವಣ ಸಂಘರ್ಷಗಳಿಗೆ ಆಲನಹಳ್ಳಿಯವರು ಕಲೆಯ ರೂಪವನ್ನು ಕೊಡಲು ಪ್ರಯತ್ನಿಸಿದ್ದಾರೆ. ಈ ಪ್ರಯತ್ನದಲ್ಲಿ ಸೋಲು ಗೆಲುವುಗಳು ಸಹಜವಾಗಿಯೇ ಕಂಡುಬಂದಿವೆ. ಇವುಗಳನ್ನು ಎದುರಿಸಲಾರದೆ

ಬಿಕ್ಕಟ್ಟಿಗೆ ಸಿಕ್ಕಿಕೊಂಡು, ನರಳುವ ನವ್ಯದ ದುರ್ಬಲ ಕಥಾನಾಯಕರು ಸಹಾ ಇಲ್ಲಿಯ ಹಲವಾರು ಕಥೆಗಳಲ್ಲಿ ಕಂಡುಬರುತ್ತಾರೆ.

'ತಪ್ತ' ಕಥೆಯಲ್ಲಿ ಹಳತು ಮತ್ತು ಹೊಸತರ ನಡುವಿನ ಸಂಘರ್ಷವನ್ನು ಚಿತ್ರಿಸುವ ಪ್ರಯತ್ನವಿದ್ದು, ಇಲ್ಲಿ ಪರಕೀಯ ಪ್ರಜ್ಞೆಯನ್ನು ವಸ್ತುವಾಗಿ ಬಳಸಿಕೊಳ್ಳಲಾಗಿದೆ. ಇಲ್ಲಿನ ನಾಯಕ ತನ್ನ ಅಕ್ಕನ ಮಗಳು ತಬ್ಬಲಿ 'ಗೌರಿ'ಯನ್ನು ಮದುವೆಯಾಗಲು ಒಪ್ಪಿಕೊಳ್ಳಲಾಗದ ಹಾಗೂ ತಾನು ಪ್ರೀತಿಸಿದ ಹುಡುಗಿ 'ಪ್ರಭಾ'ಳನ್ನು ಮರೆಯಲಾಗದ ದ್ವಂದ್ವ ಸ್ಥಿತಿಯಲ್ಲಿರುತ್ತಾನೆ. ಹೀಗೆ ನೋವು, ನಿರಾಸೆ, ಗೊಂದಲ, ಸಂಕೀರ್ಣತೆಯ ಎಲ್ಲ ಚಿತ್ರಗಳಿಂದ ಲೇಖಕರು ಕತೆಯಲ್ಲಿ ನಮಗಿರುವ ಅಂತರ್ ಪ್ರಜ್ಞೆಯ ಅರಿವನ್ನು ಹಿಗ್ಗಿಸುತ್ತಾರೆ. "ಗೌರಿ ಮೈನೆರೆದ ಮೇಲೆ ಹಿಂದೆಂದೂ ಅವಳು ನನಗಿಷ್ಟ....... ಗೌರಿಯ ಮುಖದಲ್ಲಿ ನನ್ನ ನಿರ್ಧಾರವನ್ನೆಲ್ಲ ಸುಟ್ಟುಬಿಡುವಂತಹ ನಿಶ್ಚಲವಾದ ಬಿಂಕಿ ಉರಿಯುತ್ತಿದ್ದು ನನಗೆ ಭಯವಾಗಿ ಜಗ್ಗನೆದ್ದು ಹೊರಗೆ ಬಂದೆ"[9] ಗೌರಿಯ ಮುಖ ನೋಡಿದಾಗ ಅವನ ನಿರ್ಧಾರವೆಲ್ಲ ಬೆಂಕಿಗೆ ಆಹುತಿಯಾಗುವಂತೆ ಆಗುವುದನ್ನು ಸಂಕೇತದ ಮೂಲಕ ಪರಿಣಾಮಕಾರಿಯಾಗಿ ತಂದಿದ್ದಾರೆ. ಇಲ್ಲಿ ಸಂಪೂರ್ಣವಾಗಿ ವೈಚಾರಿಕನೂ ಅಲ್ಲದ ಅಥವಾ ಕರುಳಬಳ್ಳಿಯ ಸಂಬಂಧವನ್ನು ಕಳಚಿಕೊಳ್ಳಲೂ ಸಾಧ್ಯವಿಲ್ಲದ ಅಸಹಾಯಕನಾಗಿ ನರಳುವಂತೆ ಚಿತ್ರಿಸಿರುವ ಈ ಬರಹ ನವ್ಯ ಲೇಖಕರ ರೀತಿಯದೆ ಆಗಿದೆ.

'ತಪ್ತ' ಕಥೆಗಿಂತ 'ತೊರೆ' ಕಥೆಯು ಸ್ವಲ್ಪಮಟ್ಟಿಗೆ ಭಿನ್ನವಾಗಿದ್ದು ಹೆಚ್ಚಿನ ಭಾಗ ಅದೇ ರೀತಿ ಇದೆ. ಇಲ್ಲಿ ಲೇಖಕರು ಪ್ರಭು ಮತ್ತು ಲಕ್ಷ್ಮಿಯರ ಗಾಢ ಪ್ರೀತಿಯನ್ನು ಹೋಲಿಸುವ ರೀತಿ ಅತ್ಯಂತ ಶ್ರೇಷ್ಟ ಮಟ್ಟದ್ದಾಗಿದೆ. ಆ ಒಂದು ಉತ್ಕಟತೆಯನ್ನು ಕಾವ್ಯಮಯವಾದ ಭಾಷೆಯಲ್ಲಿ ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ. 'ಸಂಬಂಧ' ಕಥೆಯು ಈ ಸಂಕಲನದಲ್ಲೇ ವಿಶಿಷ್ಟವಾಗುಳಿಯುವ ಉತ್ತಮ ಕಥೆಯಾಗಿದೆ. ಈ ಕಥೆಯಲ್ಲಿ ಭಾಷೆಯನ್ನು ಸಹ ಪರಿಣಾಮಕಾರಿಯಾಗಿ ದುಡಿಸಿಕೊಂಡಿದ್ದಾರೆ. ಕೆಲವು ಕಡೆ ಸಂಕೇತಗಳನ್ನು ಬಳಸಿಕೊಂಡು ಭಾಷೆಯನ್ನು ಕಾವ್ಯಾತ್ಮಕವಾಗಿಯೂ ಪ್ರಯೋಗಿಸಿದ್ದಾರೆ. ಕಥಾನಾಯಕನು ಲಲಿತಾಳ ಮನೆಗೆ ಸಂಜೆ ಹೊರಡುವಾಗ ಅವಳ ಮನೆಯಲ್ಲಾಗಿರುವ ದುಂತವನ್ನು ಸೂಚಿಸಲು "ಹೊತ್ತು ಮುಳುಗುವ ಹೊತ್ತು. ದೊಡ್ಡ ದೊಡ್ಡ ಮರಗಳ ಕೆಳಗೆ ಕಪ್ಪಗೆ ಹಾಸಿದ್ದ ಟಾರು ರಸ್ತೆಯ ಮೇಲೆ ಹೊರಟೆ, ಮರಗಳು ಕತ್ತಲಲ್ಲಿ ಕುಕ್ಕುತ್ತಿದ್ದವು. ಕಪ್ಪು ಬಣ್ಣ ಅನಿಷ್ಟ ಸಂಕೇತ ಅಲ್ಲವೆ? ಬರಿ ಮನಸ್ಸಿನ ಭ್ರಮೆ ಅನ್ನುತ್ತ ಲಲಿತಳ ಮನೆ ಮುಟ್ಟಿದೆ"[10] ಲಲಿತಾಳ ಮನೆಯಲ್ಲಾಗಿರುವ ದುರಂತಕ್ಕೆ

ಮುನ್ಸೂಚನೆಯಂತೆ ಕಪ್ಪು ಬಣ್ಣ, ಕಪ್ಪಗೆ ಹಾಸಿದ ಟಾರು ರಸ್ತೆ ಮುಂತಾದ ಸಂಕೇತಗಳನ್ನು ಬಳಸಿಕೊಂಡಿರುವುದು ಸಹಜವಾಗಿಯೇ ಬಂದಿದೆ.

ಕನ್ನಡದ ಅತ್ಯಂತ ಸಾರ್ಥಕ ಕಥೆಗಳ ಸಾಲಿನಲ್ಲಿ ನಿಲ್ಲಬಲ್ಲ ಕಥೆಯೆಂದರೆ 'ಆಗಂತುಕ' ಬದುಕನ್ನು ಬಾಲಕನ ಮುಗ್ಧ ದೃಷ್ಟಿಕೋನದಲ್ಲಿ ನೋಡಿರುವ ಈ ಕಥೆಯು ಇವರ ಒಟ್ಟು ಕಥೆಗಳಲ್ಲೆ ಭಿನ್ನವಾಗುಳಿಯುತ್ತದೆ. ಬದುಕನ್ನು ಮುಗ್ಧ ದೃಷ್ಟಿಕೋನದಲ್ಲಿ ನೋಡುತ್ತ ಹೋಗುವುದು ನವ್ಯ ಕಥೆಗಳ ಒಂದು ಪ್ರಮುಖ ತಂತ್ರವೆ ಆಗಿದೆ. ನವ್ಯ ಕಥೆಗಾರರಿಂದ ಪ್ರಭಾವಿತರಾದ ಆಲನಹಳ್ಳಿಯವರು ಈ ಕಥೆಯಲ್ಲಿ ಮೇಲಿನ ತಂತ್ರವನ್ನು ಅಳವಡಿಸಿಕೊಂಡಿರುವುದು ಸಹಜವಾಗಿದೆ. ಗ್ರಾಮೀಣ ಬದುಕಿನ ವಿವರಗಳು ಒಂದಕ್ಕೊಂದು ಹೊಂದಿಕೊಂಡು ಬೆಳೆಯುತ್ತ ಹೋಗುವ ವಿವರಗಳು ಧ್ವನಿಪೂರ್ಣವಾದ ಘಟನೆಗಳ ಈ ಕಥೆಯ ಶಿಲ್ಪ ಕವನದ್ದಾಗಿದೆ. ಎಲ್ಲೂ ಕಥೆಯ ಒಟ್ಟು ಪರಿಣಾಮದ ಏಕಾಗ್ರತೆಗೆ ಭಂಗ ಬಾರದಂತೆ ಇಡೀ ಒಂದು ಹಳ್ಳಿಯ ಜೀವನ ಸೂಚ್ಯವಾಗಿ ವ್ಯಕ್ತವಾಗುತ್ತದೆ. ಮುಗ್ಧ ಬಾಲಕನ ಸಾಕ್ಷಿ ಪ್ರಜ್ಞೆಯಲ್ಲಿ ಇಡೀ ಕಥೆ ನಡೆಯುತ್ತದೆ. ದೊಡ್ಡವರ ಲೋಕವು ಕಿಟ್ಟಿಯ ಕುತೂಹಲದ ಕಣ್ಣಿನ ಮೂಲಕ ಕತೆಯಲ್ಲಿ ಬಿಚ್ಚಿಕೊಳ್ಳುತ್ತಾ ಹೋಗುತ್ತದೆ. ಕಿಟ್ಟಿಯ ಮನಸ್ಸಿನಲ್ಲಿ ಹುಟ್ಟುವ ಸಾವಿನ ಮುನ್ನಳುಕು ಗಾಢವಾಗಿ ಮುಂದೆ ಬೆಳೆದು ಮೃತ್ಯು ಪ್ರಜ್ಞೆಯಾಗಿ ಕಾಡಬಹುದಾದ ಸೂಚನೆಯೊಂದಿಗೆ ಈ ಕಥೆಯು ಮುಕ್ತಾಯವಾಗುತ್ತದೆ. ಇಲ್ಲಿ ಲೇಖಕರು ಯಾವುದನ್ನು ವಿವರವಾಗಿ ಹೇಳದೆ ಸೂಚ್ಯವಾಗಿ, ಪರಿಣಾಮಕಾರಿಯಾದ ಭಾಷೆಯಲ್ಲಿ ಸಾವಿನ ಬಗೆಗೆ ಕಟ್ಟಿಕೊಟ್ಟಿರುವ ರೀತಿ ಅದ್ಭುತವಾಗಿದೆ. (ಅಜ್ಜ ಸಾವಿನ ಬಗ್ಗೆ ಮಾತನಾಡುತ್ತ 'ಅವನು ಬಂದು ಕರೆದ್ರೆ' ಹೋಗಬೇಕು ಎಂಬ ಮಾತು) 'ಸಾಸ್ವತ', 'ಯಂಗಾಗ್ಬುಟ್ಟವ್ರೆ', 'ಯಿಂಡಾಕ್ಬುಟ್ಟಿದೆ' ಎಂಬ ಗ್ರಾಮೀಣ ನುಡಿಗಟ್ಟನ್ನು ಸಹಜವಾಗಿಯೆ ತಂದಿದ್ದಾರೆ.

ಎರಡನೆ ಕಥಾ ಸಂಕಲನವಾದ 'ಫೀನಿಕ್ಸ್' ಕೃತಿಯಲ್ಲಿ ನಾಲ್ಕು ಕಥೆಗಳಿವೆ. ನವ್ಯ ಸಾಹಿತ್ಯದ ಧೋರಣೆಯಿಂದ ಪ್ರಭಾವಿತರಾಗಿದ್ದ ಆಲನಹಳ್ಳಿಯವರು ಆ ಹಿನ್ನೆಲೆಯಲ್ಲಿಯೇ ಮಾನವ ಸಂಬಂಧಗಳನ್ನು ಅರ್ಥೈಸುತ್ತಾ ಹೋಗುತ್ತಾರೆ. ಯುವ ಮನಸ್ಸುಗಳ ಸುತ್ತಮುತ್ತ ಹರಡಿಕೊಂಡಿರುವ ಈ ನಾಲ್ಕು ಕಥೆಗಳು ಓದುಗರನ್ನು ಬೇಗ ತಟ್ಟುವಂತಹವುಗಳಾಗಿವೆ. ಒಬ್ಬ ಲೇಖಕ ತಾನು ಕಂಡುಂಡ ಅನುಭವಗಳನ್ನು ಎಷ್ಟು ಪ್ರಾಮಾಣಿಕವಾಗಿ ವಾಸ್ತವಿಕ ನೆಲೆಗಟ್ಟಿನಲ್ಲಿ ಕೊಡಲು ಸಾಧ್ಯವೋ ಆ ಎಲ್ಲ ಸಾಧ್ಯತೆಗಳು ಇಲ್ಲಿನ ಕಥೆಗಳಲ್ಲಿ ಕಂಡುಬರುತ್ತವೆ. ಈ ಕಥೆಗಳ ಸಾಮಾನ್ಯವಾದ ಲಕ್ಷಣವೆಂದರೆ ಕಥಾನಾಯಕರುಗಳೆಲ್ಲರೂ ಗ್ರಾಮೀಣ ಪರಿಸರದಿಂದ ಬಂದ

ಶೂದ್ರವರ್ಗದವರು. ಇವರ ನಾಯಕಿಯರು ಬ್ರಾಹ್ಮಣ ತರುಣಿಯರು. ಇವರು ವಿದ್ಯಾವಂತರಾಗಿದ್ದು ಹೊಸ ಬದುಕಿಗೆ ಹಾತೊರೆಯುವವರು. ಕಥಾನಾಯಕನ ಅಸಾಧಾರಣ ವ್ಯಕ್ತಿತ್ವಕ್ಕೆ ಮಾರುಹೋಗಿ ಜಾತಿ, ವಯಸ್ಸು, ಅಂತಸ್ತು, ಮಡಿವಂತಿಕೆಗಳನ್ನು ಕಳಚಿ ಅವರನ್ನು ಪ್ರೀತಿಸುತ್ತಾರೆ. ಲೈಂಗಿಕ ಸಂಬಂಧವನ್ನು ಇಟ್ಟುಕೊಳ್ಳುತ್ತಾರೆ. ಇವರ ಈ ಉತ್ಕಟತೆ ಎಷ್ಟರ ಮಟ್ಟಿಗೆ ಇದೆಯೆಂದರೆ, ಕೆಲವರು ಮದುವೆಯಾಗಿ ಮಕ್ಕಳಾಗಿ ಹೊರದೇಶದಲ್ಲಿ ಜೀವನ ಮಾಡುತ್ತಿರುವವರೂ ಊರಿಗೆ ಬಂದಾಗ ಇವರೊಡನೆ ಬೆರೆಯಲು ಹಾತೊರೆಯುತ್ತಾರೆ. ಇಲ್ಲಿ ಲೇಖಕರು ಪ್ರೇಮ ಸಂಬಂಧಗಳು ಮದುವೆಯಂತಹ ಬಂಧನಗಳಿಗಿಂತಲೂ ಶ್ರೇಷ್ಠವಾದವುಗಳು ಎಂಬುದನ್ನು ಧ್ವನಿಸುವುದಕ್ಕೆ ಪ್ರಯತ್ನಿಸಿದ್ದಾರೆ. ಇವರ ಎಲ್ಲಾ ಕಥೆಗಳಲ್ಲೂ ಕಾಮದ ಸೆಳೆತವಿದೆ.

'ಗೀಜಗನ ಗೂಡು' ಕಥೆಯಲ್ಲಿ ಲೇಖಕರು ರಷ್ಯನ್ ಮತ್ತು ಭಾರತೀಯ ಸಮಾಜದಲ್ಲಿ ಬದುಕನ್ನು ನೋಡುವ ರೀತಿಗಳನ್ನು ಗುರುತಿಸುತ್ತಲೇ, ಭಾರತೀಯ ಸಮಾಜದ ಮಹಿಳೆಯರ ಸಂಕಷ್ಟಗಳನ್ನು ಕಥೆಯಲ್ಲಿ ಸಹಜವಾಗಿ ತಂದಿದ್ದಾರೆ. ಲೇಖಕರು ಪ್ರೇಮ, ಕಾಮ, ಸಂಬಂಧಗಳು ಮದುವೆಯಂತಹ ಸಂಬಂಧಗಳಿಗಿಂತ ಉನ್ನತವಾದವು ಎಂಬುದನ್ನು ಪ್ರತಿಪಾದಿಸುವುದರ ಜೊತೆಗೆ, ಇದಕ್ಕೆ ಯಾವುದೇ ಜಾತಿ, ವಯಸ್ಸು, ಅಂತಸ್ತು, ಹುದ್ದೆ- ಮುಂತಾದವುಗಳಾವುವೂ ಅಡ್ಡಬರಬಾರದೆಂಬುದನ್ನು ಪ್ರತಿಪಾದಿಸುತ್ತಾರೆ.

ಆಲನಹಳ್ಳಿಯವರು ಹಲವು ಸಾರ್ಥಕ ಕವಿತೆ, ಕಥೆಗಳನ್ನು ಬರೆದಿರುವರಾದರೂ, ಅವರ ಶ್ರೇಷ್ಠ ಪ್ರತಿಭೆ ಪೂರ್ಣ ಅಭಿವ್ಯಕ್ತಿಯನ್ನು ಪಡೆದಿರುವುದು ಅವರ ಕಾದಂಬರಿಗಳಲ್ಲಿ ಇವರು ಮೂರು ಕಾದಂಬರಿಗಳನ್ನು ಬರೆದಿದ್ದಾರೆ. ಈ ಕಾದಂಬರಿಗಳು ಕನ್ನಡ ಕಾದಂಬರಿ ಲೋಕದಲ್ಲಿ ಪ್ರಸಿದ್ಧಿಯನ್ನು ಪಡೆದ ಕೃತಿಗಳಾಗಿವೆ.

"ಕಾಡು" ಕಾದಂಬರಿಯು ಎಷ್ಟು ಜನಪ್ರಿಯತೆ ಮತ್ತು ಮಾನ್ಯತೆಯನ್ನು ಗಳಿಸಿತೆಂದರೆ ಅದು ಇದುವರೆಗೂ ಒಟ್ಟು ಎಂಟು ಪುನರ್ ಮುದ್ರಣವನ್ನು ಕಂಡ ಹೆಗ್ಗಳಿಕೆಯ ಕೃತಿಯಾಗಿದೆ. ಸತ್ವ ಮತ್ತು ಮೌಲಿಕತೆ ಈ ಎರಡು ದೃಷ್ಟಿಗಳಿಂದಲೂ ಆಲನಹಳ್ಳಿಯವರ ಪ್ರತಿಭಾ ಶಕ್ತಿಗೆ ಈ ಕೃತಿ ಸಾಕ್ಷಿಯಾಗಿದೆ. ಇದರ ಸತ್ವಕ್ಕೆ ಇನ್ನೊಂದು ಸಾಕ್ಷಿಯೆಂದರೆ-ಹಿಂದಿ, ಮರಾಠಿ, ತೆಲುಗು, ತಮಿಳು, ಉರ್ದು, ವರಿಯಾ, ಅಸ್ಸಾಮಿ ಮುಂತಾದ ಭಾರತೀಯ ಭಾಷೆಗಳಿಗೆ ಅನುವಾದಗೊಂಡು ಅಲ್ಲಿಯೂ ಸಾಕಷ್ಟು ಜನಪ್ರಿಯತೆಯನ್ನು ಗಳಿಸಿದೆ. ಇಷ್ಟಲ್ಲದೆ ರಷ್ಯನ್ ಮತ್ತು ಇಂಗ್ಲೀಷ್ ಭಾಷೆಗಳಿಗೂ ಅನುವಾದವಾಗಿರುವ ಹೆಗ್ಗಳಿಕೆಯ ಕೃತಿ ಇದಾಗಿದೆ. ಒಬ್ಬ

ಲೇಖಕನಿಗೆ ಯಾವುದೇ ಪ್ರಶಸ್ತಿ ಪುರಸ್ಕಾರಕ್ಕಿಂತ ಈ ರೀತಿಯ ಜನಪ್ರಿಯತೆ ಹಾಗೂ ಮಾನ್ಯತೆ ಸಿಗುವುದು ಅತ್ಯಂತ ಮಹತ್ವವೆನಿಸುತ್ತದೆ. ಆಲನಹಳ್ಳಿಯವರಿಗೆ ಸಿಕ್ಕ ಈ ಮಾನ್ಯತೆ ವೈಯಕ್ತಿಕವಾಗಿ ಅವರಿಗೆ ಸಲ್ಲಬಹುದಾದರೂ ಇದು ಕನ್ನಡ ಭಾಷೆಗೆ ಸಂದ ಮಾನ್ಯತೆಯಾಗಿರುವುದರಿಂದ ಆಲನಹಳ್ಳಿಯವರ ಕೊಡುಗೆ ಗಮನಾರ್ಹವಾದುದು ಎಂದರೆ ಅತಿಶಯೋಕ್ತಿಯಾಗಲಾರದು. ಇಷ್ಟಲ್ಲದೆ ಈ ಕಾದಂಬರಿಯು ಚಲನಚಿತ್ರವಾಗಿಯೂ ಪ್ರಸಿದ್ಧಿ ಗಳಿಸಿದೆ. ಹೀಗೆ "ಕಾಡು" ಕಾದಂಬರಿಯು ರಾಷ್ಟ್ರೀಯ ಮತ್ತು ಅಂತರ ರಾಷ್ಟ್ರೀಯ ಮಟ್ಟದಲ್ಲಿ ಕೀರ್ತಿ ಪಡೆದ ಕೃತಿಯಾಗಿದೆ.

"ಪರಸಂಗದ ಗೆಂಡೆತಿಮ್ಮ" ಕಾದಂಬರಿಯೂ ಲೋಕದಲ್ಲಿ ಸಾಕಷ್ಟು ಜನಪ್ರಿಯತೆಯನ್ನು ಗಳಿಸಿದೆ. ಇದು ಸಹಾ ನಾಲ್ಕು ಪುನರ್ ಮುದ್ರಣವನ್ನು, "ಭುಜಂಗಯ್ಯನ ದಶಾವತಾರಗಳು" ಕಾದಂಬರಿಯು ಎರಡು ಪುನರ್ ಮುದ್ರಣಗಳನ್ನು ಕಂಡು ಜನಪ್ರಿಯವಾಗಿದೆ. ಇವು ಸಹಾ ಚಲನಚಿತ್ರವಾಗಿಯೂ ಹೆಸರು ಗಳಿಸಿದೆ. ಈ ಮೂರು ಕಾದಂಬರಿಗಳು ಮಲೆಯಾಳಂ ಭಾಷೆಗೂ ಭಾಷಾಂತರವಾಗಿ ಅಲ್ಲಿಯೂ ಸಾಕಷ್ಟು ಜನಪ್ರಿಯತೆಯನ್ನು ಗಳಿಸಿದೆ. ಹಾಗಾಗಿ ಆಲನಹಳ್ಳಿಯವರು ಕೇರಳ ರಾಜ್ಯದಲ್ಲೂ ಅಪಾರ ಪ್ರೀತಿ, ಗೌರವವನ್ನು ಗಳಿಸಿಕೊಂಡಿದ್ದಾರೆ. ಅತ್ಯಂತ ಸೂಕ್ಷ್ಮ ಗ್ರಹಿಕೆಯ ಆಲನಹಳ್ಳಿಯವರ ಮೇಲೆ ತಮ್ಮ ಬಾಲ್ಯದ ಜೀವನ ಹಾಗೂ ಗ್ರಾಮೀಣ ಬದುಕಿನ ಪರಿಸರ ದಟ್ಟವಾದ ಪ್ರಭಾವ ಬೀರಿದೆ. ಬಾಲ್ಯದ ಮುಗ್ಧತೆ ಮತ್ತು ಯೌವ್ವನದ ಉತ್ಕರ್ಷ ಇವುಗಳೆರಡನ್ನು ಸಾಹಿತ್ಯ ಸೃಷ್ಟಿಯಲ್ಲಿ ತುಂಬಾ ಪರಿಣಾಮಕಾರಿಯಾಗಿ ಬಳಸಿಕೊಂಡಿದ್ದಾರೆ. ಒಂದು ಸಾಕ್ಷೀ ಪ್ರಜ್ಞೆಯ ಅಭಿವ್ಯಕ್ತಿ ಕ್ರಿಯೆಯಾಗಿದೆ, ಇನ್ನೊಂದು ಅನುಭವ ಪ್ರಜ್ಞೆಯ ಅಭಿವ್ಯಕ್ತಿಯಾಗಿದೆ. ಸಾಕ್ಷೀ ಪ್ರಜ್ಞೆಯಲ್ಲಿ ಅವರ ಬಾಲ್ಯ ದಿನಗಳು, ತಾವು ನೋಡಿ, ಕಂಡುಂಡ ಘಟನೆಗಳು, ಪ್ರಭಾವಿತ ವ್ಯಕ್ತಿಗಳು ಹಾಗೂ ಇನ್ನಿತರ ದಟ್ಟ ವಿವರಗಳು, ಹಿನ್ನೆಲೆಗಳು ಒಳಗೊಳ್ಳುತ್ತವೆ. ಇವರ ಮೂರು ಕಾದಂಬರಿಗಳು ಬಾಲ್ಯದ ಸಾಕ್ಷಿ ಪ್ರಜ್ಞೆಯ ಅಭಿವ್ಯಕ್ತಿ ಕ್ರಿಯೆಗೆ ಸಾಕ್ಷಿಯಾಗಿದೆ. ಹಾಗಾಗಿ ಆಲನಹಳ್ಳಿಯವರಿಗೆ ಬಾಲ್ಯದ ದಟ್ಟವಾದ ಗ್ರಾಮೀಣ ಬದುಕು ಪ್ರಮುಖವಾದ ಪ್ರೇರಣೆಯನ್ನು ನೀಡಿದೆ. ಈ ಮೂರು ಕಾದಂಬರಿಗಳು ಸಮೃದ್ಧವಾದ ಗ್ರಾಮೀಣ ಪರಿಸರದಿಂದ ಆವೃತ್ತಗೊಂಡವುಗಳಾಗಿವೆ. ಆಲನಹಳ್ಳಿಯವರು ತಮ್ಮಲ್ಲಡಗಿದ್ದ ಪ್ರತಿಭಾ ಸಂಪನ್ನವಾದ ಅನುಭವಗಳಿಗೆ ಕಲೆಯ ರೂಪವನ್ನು ಕೊಡುತ್ತಾ ಹೋಗುತ್ತಾರೆ. ಇವರು ಬರೆಯುವ ಕಾಲದಲ್ಲಿ ನವ್ಯ ಸಾಹಿತ್ಯ ಉಚ್ಛ್ರಾಯ ಸ್ಥಿತಿಯಲ್ಲಿದ್ದುದ್ದರಿಂದ ಪ್ರಾರಂಭದ ಹಂತದಲ್ಲಿ ಈ ಬರಹಗಾರರೆಲ್ಲರೂ ನವ್ಯ ಸಾಹಿತ್ಯದ ಪ್ರಭಾವಕ್ಕೂ ಒಳಗಾಗಿದ್ದಾರೆ. ಹಾಗಾಗಿ

ನವ್ಯ ಕಾದಂಬರಿಯ ಪ್ರಮುಖ ಲಕ್ಷಣಗಳು "ಕಾಡು" ಕಾದಂಬರಿಯಲ್ಲಿ ಸ್ಪಷ್ಟವಾಗಿ ಕಂಡುಬರುತ್ತವೆ. ಮುಗ್ಧ ಬಾಲಕನ ದೃಷ್ಟಿಯಲ್ಲಿ ಮಾನವ ಲೋಕದಲ್ಲಿನ ಕ್ರೌರ್ಯಗಳನ್ನು ವಿವರವಾಗಿ ಅನಾವರಣಗೊಳಿಸುತ್ತಾ ಹೋಗಿರುವುದನ್ನು ಈ ಕೃತಿಯಲ್ಲಿ ಕಾಣುತ್ತೇವೆ. ಆದರೆ ಮುಂದಿನ ಕಾದಂಬರಿಗಳಲ್ಲಿ ಆಲನಹಳ್ಳಿಯವರು ಭಿನ್ನವಾದ ದಾರಿಯನ್ನು ತುಳಿಯುತ್ತಾರೆ. ಟಿ.ಪಿ. ಅಶೋಕ ಅವರು "ಕಾಡು"ವಿನಲ್ಲಿ ವಾಸ್ತವತೆ, ನವ್ಯತೆಗಳ ಕಿರು ಇಕ್ಕಟ್ಟಿನ ದಾರಿಯಲ್ಲಿ ತಮ್ಮ ಪ್ರಯಾಣ ಆರಂಭಿಸಿದ, ಕೃಷ್ಣ 'ಗೆಂಡೆತಿಮ್ಮ'ದಲ್ಲಿ ರಸ್ತೆಗೆ ಇಳಿದಿದ್ದರೆ, 'ಭುಜಂಗಯ್ಯ'ದಲ್ಲಿ ವಾಸ್ತವತೆಯ ಹೆದ್ದಾರಿಗೆ ಬಂದಿಳಿದಿದ್ದಾರೆ"[೧೪] ಎಂದು ಹೇಳುವ ಮಾತುಗಳು ಆಲನಹಳ್ಳಿಯವರ ಕಾದಂಬರಿಯ ಬೆಳವಣಿಗೆಯನ್ನು ಸೂಕ್ತವಾಗಿ ಗುರುತಿಸುತ್ತವೆ.

"ಕಾಡು" ಕಾದಂಬರಿಯು ಭಾಷೆಯಲ್ಲಿನ ಬಿಗುವು, ಶಿಲ್ಪ, ರಚನಾತಂತ್ರ ಮುಂತಾದವುಗಳ ದೃಷ್ಟಿಯಿಂದ ನವ್ಯದ ಜಾಡಿನಲ್ಲೇ ಸಾಗುತ್ತದೆ. ಈ ಕಾದಂಬರಿ ಒಬ್ಬ ಮುಗ್ಧ ಬಾಲಕನ ಕುತೂಹಲದ ಕಣ್ಣಿನ ಮೂಲಕ ಬದುಕನ್ನು ನೋಡುತ್ತಾ ಮಾನವನಲ್ಲಿ ಸುಪ್ತವಾಗಿರುವ ಕ್ರೌರ್ಯ, ಹಿಂಸೆ ಮುಂತಾದವುಗಳನ್ನು ವಿವರವಾಗಿ ಬಯಲಿಗೆಳೆಯುತ್ತಾ ಹೋಗುತ್ತದೆ. ಈ ರೀತಿಯ ಮನೋವಿಕಾರಗಳು ಸಮಯ ಬಂದಾಗ ಹೇಗೆ ತನ್ನ ರಾಕ್ಷಸ ಸ್ವರೂಪವನ್ನು ತಾಳುತ್ತವೆ–ಎಂಬುದನ್ನು ಈ ಕೃತಿಯು ಶೋಧಿಸುತ್ತದೆ. ಉಳ್ಳವರ ನಡುವಿನ ಅರ್ಥವಿಲ್ಲದ ಪ್ರತಿಷ್ಠೆಯ ಘರ್ಷಣೆಯಲ್ಲಿ ದಲಿತ ಕೆಂಚ ಬಲಿಯಾಗುವ ಚಿತ್ರಣ ಹೃದಯ ಕಲಕುವಂತೆ ಮೂಡಿಬಂದಿದೆ. ಹೊಸೂರು ಮತ್ತು ಕೊಪ್ಪಲಿನಂತಹ ಕುಗ್ರಾಮಗಳಲ್ಲಿ ನಡೆಯುವ ಉಳ್ಳವರ ನಡುವಿನ ನಿಲ್ಲದ ಘರ್ಷಣೆ ಮತ್ತು ಆ ಮೂಲಕ ದಲಿತರ ಶೋಷಣೆ–ಇಡೀ ಭಾರತದ ಹಳ್ಳಿಗಳಲ್ಲೆಲ್ಲಾ ನಡೆಯುತ್ತದೆಂಬುದನ್ನು ಲೇಖಕರು ಧ್ವನಿಸುತ್ತಾರೆ. ಬದುಕಿನ ಬಗೆಗೆ ಕಮಲಮ್ಮನಲ್ಲಿರುವಷ್ಟು ಕಾಳಜಿ, ಎಚ್ಚರಿಕೆ, ವಿವೇಕ, ಚಂದ್ರೇಗೌಡನಲ್ಲಿರದೆ ಇರುವುದನ್ನು ಕಾಣುತ್ತೇವೆ. 'ನಾಳೆಕೆ ಮನೆಗೂ ಬೆಂಕಿ ಆಕಕ್ಕು ಯೇಸದ ಜನ' ಎಂಬ ಆಕೆಯ ಮಾತಿನಲ್ಲಿ ಇಡೀ ಕಾದಂಬರಿಯ ದುರಂತದ ಸರ್ವ ವಿವರಗಳೂ ಘನೀಭೂತವಾಗಿರುವುದನ್ನು ಕಾಣಬಹುದು. ಆಲನಹಳ್ಳಿಯವರು ಒಂದು ಸಂದರ್ಭವನ್ನು ತೀರ ವಾಚಾಳಿತನದಿಂದ ವಿವರಿಸದೆ, ಕೆಲವೇ ಮಾತುಗಳಲ್ಲಿ ಧ್ವನಿಪೂರ್ಣವಾಗಿ ಹೇಳಿರುವ ಸಂದರ್ಭಗಳನ್ನು ಇವರ ಇನ್ನುಳಿದ ಕಾದಂಬರಿಗಳಿಗಿಂತ ಈ ಕೃತಿಯಲ್ಲೇ ಹೆಚ್ಚಾಗಿ ಗುರುತಿಸಬಹುದು. ಇದು ಅವರ ಪ್ರತಿಭೆಗೆ ಸಾಕ್ಷಿಯಾಗಿದೆ.

ಘಟನೆಗಳನ್ನು ಕಟ್ಟಿಕೊಡುವಾಗ ಸೂಚ್ಯವಾಗಿ ಹಲವು ಸಂಕೇತ, ಪ್ರತಿಮೆಗಳನ್ನು ತರುವುದರ ಮೂಲಕ, ಕಾವ್ಯಾತ್ಮಕವಾಗಿ, ಪರಿಣಾಮಕಾರಿಯಾಗಿ ಭಾಷೆಯನ್ನು ಬಳಸಿದ್ದಾರೆ. "ಕೇರಿಯೆಲ್ಲ ಅವಂದೆ ಆಗ್ಬುಟ್ಟಿತ್ತು, ಮನಸಾ ಅಂದ್ರೆ ಅಂಗೆ ಮರಿಬ್ಯಾಡ್ದು. ಈ ಕಾಲದ ಐಕಳು ವಸಿ ಗೊನೆಗೆ ನೀರಿಳಿತು ಅಂದ್ರೆ ಸಾಕು, ಕಂಡವರ ಯೆಡ್ತಿರ್ನೆಲ್ಲ ನಾವೆ ಆಳ್ತೀವಿ ಅಂತ ಒದರಾಡ್ತವೆ"[೫] ಎಂಬ ಮಾಗಿದ ತುಂಬು ಜೀವನಾನುಭವದ ದಲಿತ ಮುದುಕನೊಬ್ಬನ ಈ ಮಾತುಗಳು ಅರ್ಥಗರ್ಭಿತವಾಗಿದೆ. ಕಾದಂಬರಿಕಾರರು ಸಂದರ್ಭಕ್ಕೆ ತಕ್ಕಂತೆ ಗಾದೆ ಮಾತುಗಳನ್ನು ಬಳಸಿಕೊಂಡಿದ್ದಾರೆ. 'ಬೇಲಿಯೆ ಎದ್ದು ಹೊಲ ಮೇದ ಹಾಗೆ'[೬], 'ಕಳ್ರ ಆಗಲಕಾಯ್ಗೊಂದು ಬೇವಿನ ಸಾಕ್ಷಿಯಂತೆ'[೭]. 'ಕಾಡು' ಎಂಬ ತಲೆಬರಹ ಕೂಡ ಸಾಂಕೇತಿಕವಾಗಿ ಬಳಕೆಯಾಗಿದ್ದು ಮನುಷ್ಯನು ಎಲ್ಲ ಬಗೆಯ ಪಶುತ್ವದ ರೀತಿಯನ್ನೂ ಅರ್ಥಗರ್ಭಿತವಾಗಿ ಪ್ರತಿಬಿಂಬಿಸಲು ಸಹಾಯಕವಾಗಿದೆ.

'ಪರಸಂಗದ ಗೆಂಡೆತಿಮ್ಮ' ಕಾದಂಬರಿಯು ಇವರ ಇನ್ನಿತರ ಕಾದಂಬರಿಗಳಂತೆಯೇ ಮುಗ್ಧ ಗ್ರಾಮೀಣರ ಬದುಕನ್ನೇ ವಸ್ತುವನ್ನಾಗಿ ಒಳಗೊಂಡಿದೆ. ಕಾದಂಬರಿಯ ವಸ್ತುವನ್ನು ಕುರಿತಂತೆ ಕೃತಿಯ ಆರಂಭದಲ್ಲೇ ಲೇಖಕರು ಹೀಗೆ ಹೇಳುತ್ತಾರೆ. "ನನ್ನ ಬಾಲ್ಯದಲ್ಲಿ ಗಾಢವಾಗಿ ಕಾಡಿ ನನ್ನೊಳಗೆ ಅತ್ಯಂತ ಆಪ್ತವಾಗಿ ಉಳಿದು, ಸದಾ ಉರಿಯುತ್ತಿರುವ ಹತ್ತಾರು ಮೂರ್ತಿಗಳಲ್ಲಿ ಇವನೂ ಒಬ್ಬ. ಊರಿನ ಪಾಲಿಗೆ ಸಾಮಾನ್ಯನೆನಿಸಿದ್ದ ವ್ಯಕ್ತಿ ಅಂದು ನನ್ನ ಮುಗ್ಧ ಮನಸ್ಸಿಗೆ ಅಸಾಮಾನ್ಯ ಹಾಗೂ ಅದ್ಭುತವೆನಿಸಿದ್ದಂತೆ ಇವತ್ತೂ ಜ್ವಲಂತವಾಗಿ ಅನ್ನಿಸಿದ್ದೇ, ಈ ಕೃತಿಯ ಸೃಷ್ಟಿಗೆ ಕಾರಣ". ಆಧುನಿಕ ಕನ್ನಡ ಸಾಹಿತ್ಯದಲ್ಲಿ ನಾಗರೀಕತೆಯ ಪ್ರವೇಶದಿಂದ ಮೊದಮೊದಲು ಗ್ರಾಮೀಣ ಬದುಕು ತಲ್ಲಣಗೊಳ್ಳುವ. ವಿಚಲಿತಗೊಳ್ಳುವ, ಕ್ರಮೇಣ ಬೇರೊಂದು ವಿಕಾಸಕ್ಕೆ ಎಡೆಮಾಡಿಕೊಡುವ ಅನೇಕ ಕಥೆ, ಕಾದಂಬರಿಗಳು ಬಂದಿವೆ 'ಅಬಚೂರಿನ ಪೋಸ್ಟಾಪೀಸು' 'ಡಾಂಬರು ಬಂದುದ್ದು' ಮುಂತಾದವುಗಳು ಗ್ರಾಮೀಣ ಬದುಕಿಗೆ ನಾಗರೀಕತೆಯ ಪ್ರವೇಶದಿಂದ ಉಂಟಾಗುವ ಪರಿಣಾಮಗಳನ್ನು ಶೋಧಿಸುತ್ತದೆ. ಆದರೆ ಆಲನಹಳ್ಳಿಯವರು ಕೇವಲ ಲಂಗ, ಬಾಡಿ, ಸ್ನೋ, ಪೌಡರು, ಗಮನದೆಣ್ಣೆ–ಮುಂತಾದ ವಸ್ತುಗಳ ಪ್ರವೇಶದಿಂದ ಕೂಡ ಗ್ರಾಮೀಣ ಬದುಕು ತಲ್ಲಣಗೊಳ್ಳುವ ವಿಚ್ಛಿದ್ರಕಾರಿಯಾಗುವ ರೀತಿಯನ್ನು ಚಿತ್ರಿಸಿರುವುದು ವಿಶಿಷ್ಟವೆನಿಸುತ್ತದೆ. ಜೊತೆಗೆ ಕಾದಂಬರಿಯ ತಲೆಬರಹವೆ

ಸೂಚಿಸುವಂತೆ 'ಪರಸಂಗ' ಎಂದರೆ ಕಥೆ ಹೇಳುವುದು ಎಂಬರ್ಥಕ್ಕೆ ತಕ್ಕಂತೆ ಗೆಂಡೆತಿಮ್ಮನ ಪಾತ್ರ ರೂಪುಗೊಂಡಿದೆ.

ಆಲನಹಳ್ಳಿಯವರ ಕಾದಂಬರಿಗಳಲ್ಲಿ ಬರುವ ಸ್ತ್ರೀ ಪಾತ್ರಗಳು ದೇವತೆಗಳಾಗಿ ಕಂಗೊಳಿಸುವುದಿಲ್ಲ ಇಲ್ಲವೆ ರಕ್ಕಸಿಯರಂತೆ ಎಲ್ಲೂ ಕ್ರೂರವಾಗಿ ಆರ್ಭಟಿಸುವುದೂ ಇಲ್ಲ. ರಕ್ತಮಾಂಸದಿಂದ ತುಂಬಿಕೊಂಡ ಈ ನೆಲದ ಜೀವಂತ ಪಾತ್ರಗಳಾಗಿ ಮೂಡಿಬಂದಿವೆ. ಆಲನಹಳ್ಳಿ ಸ್ತ್ರೀಯನ್ನು 'ಕಾಮ'ದ ಸೆಳೆತದ ಸುತ್ತಮುತ್ತಲಿನ ವಿವರಗಳ ನಡುವೆಯೇ ಚಿತ್ರಿಸುತ್ತ ಹೋಗುತ್ತಾರೆ. ಆದರೆ ಅವರ ಕಾದಂಬರಿಗಳಲ್ಲಿ ಯಾವುದೇ ಪೂರ್ವಾಗ್ರಹಕ್ಕೂ ಒಳಗಾಗದೆ, ಹೆಣ್ಣು ತನ್ನ ಪರಿಸರದಲ್ಲಿ, ತನಗೆ ತೋಚಿದಂತೆ ಬದುಕುವ ಸಹಜ ವ್ಯಕ್ತಿಗಳಾಗಿದ್ದಾರೆ.

ಈ ಕಾದಂಬರಿಯಲ್ಲಿ ಬರುವ ಮರಂಕಿಯಾಗಲಿ, ದೇವಿರವ್ವನಾಗಲಿ, ವೋಟಮ್ಮನಾಗಲಿ, ಸ್ತ್ರೀಗೆ ಸಹಜವಾದ ಮಣ್ಣಿಗಂಟಿದ ದೋಷವನ್ನು ಒಳಗೊಂಡು ವಿಶಿಷ್ಟವಾಗಿಯೇ ಉಳಿಯುತ್ತಾರೆ. ಲೇಖಕರು ಗೆಂಡೆತಿಮ್ಮನ ಬಗ್ಗೆ ಏನೇ ಅನುಕಂಪವನ್ನು ತೋರಿದರೂ ಅವನು 'ಗೆಂಡೆ' ಹಾಕಿಕೊಂಡಿರುವ 'ತಿಮ್ಮ'ನಾಗಿದ್ದಾನೆ. ಚಿಕ್ಕಂದಿನಲ್ಲಿ ಗೆಂಡೆ ಹೊಟ್ಟೆ ಹಾಕಿಕೊಂಡದ್ದನ್ನು ಲೇಖಕರು ಕಾದಂಬರಿಯಲ್ಲಿ ಹೇಳುತ್ತಲೇ ಅವನ ಬಗ್ಗೆ 'ಅಯ್ಯೋ ಪಾಪ' ಎನ್ನಿಸುವಂತೆ ಚಿತ್ರಿಸುತ್ತಾ ಹೋಗುತ್ತಾರೆ. 'ಪರಸಂಗದ ಗೆಂಡೆತಿಮ್ಮ' ಎಂಬ ಕಾದಂಬರಿಯಲ್ಲಿ ತಲೆಬರಹವೆ ಸೂಚಿಸುವಂತೆ ಪರಸಂಗ ಎಂದರೆ ಕಥೆ ಹೇಳುವುದು ಎಂಬಂತೆ ಗೆಂಡೆತಿಮ್ಮನ ಪಾತ್ರ ರೂಪುಗೊಂಡಿದೆ. ನಾಗರೀಕತೆಯ ಪ್ರಭಾವದಿಂದ ಮಾನವ ಕೆಲವು ರೀತಿಯ ಪ್ರಗತಿಯನ್ನು ಕಾಣಬಹುದು. ಬದುಕನ್ನು ಸುಧಾರಿಸಬಹುದೆಂಬುದನ್ನು ಗೆಂಡೆತಿಮ್ಮ ಮತ್ತು ಮರಂಕಿ ಪಾತ್ರಗಳ ಮೂಲಕ ಲೇಖಕರು ಸಹಜವಾಗಿಯೇ ವಿವರಿಸಿದ್ದಾರೆ. ಶಿವಣ್ಣ ಮತ್ತು ಮರಂಕಿಯರ ಅನೈತಿಕ ಸಂಬಂಧವನ್ನು ಲೇಖಕರು ಸಂಕೇತದ ಮೂಲಕ ಹೀಗೆ ಚಿತ್ರಿಸುತ್ತಾರೆ. "ಮರಂಕಿಗೆ ಒಂದು ದೊಡ್ಡ ಘಟಸರ್ಪ ಸುತ್ತಿಕೊಂಡಂತೆ, ತಾನು ಭಯದಿಂದ ಕಿರುಚುತ್ತ ಬಿಡಿಸಿಕೊಳ್ಳಬೇಕೆನ್ನುವಷ್ಟರಲ್ಲಿ ಮರಂಕಿಯೇ ಘಟಸರ್ಪವಾಗಿ ಬಿಟ್ಟಂತೆ"[೮] ಕನಸನ್ನು ಕಾಣುತ್ತಾನೆ. ಈ ರೀತಿಯ ಸಂಕೇತಗಳ ಮೂಲಕ ಸಂದರ್ಭದ ಚಿತ್ರಣವನ್ನು ಲೇಖಕರು ಹಲವು ಕಡೆ ಬಳಸಿದ್ದಾರೆ.

ಆಲನಹಳ್ಳಿಯವರು ಕಾದಂಬರಿಯಲ್ಲಿ ಮೈಸೂರಿನ ಸುತ್ತಮುತ್ತಲಿನ ಗ್ರಾಮ್ಯಭಾಷೆಯನ್ನು ಆಯಾಯ ಪಾತ್ರಗಳ ಮನೋಧರ್ಮಕ್ಕೆ ತಕ್ಕಂತೆ, ಯಾವುದೇ

ಮಡಿವಂತಿಕೆ ಇಲ್ಲದೆ, ಬಳಸಿರುವ ರೀತಿಯು ಅದ್ಭುತವಾಗಿದೆ. "ನಮ್ಮೈದನಿಗೆ ಈ ಎಣ್ಣೆ ಪಸಂದಾಗದೆ ಅಂತ ಆಡುತ್ತಲೇ ಗೆಂಡೆತಿಮ್ಮನಿಗೂ ಮಾಡ್ಕಂಡಿಯಾ ವೊಗ ಎಂದು ಕೇಳಿದಾಗ ಊಂ ಆ ಕೆಂಚಿ ಕಟ್ಕಂಡು ನಾನು ಕಾಲ ಆಕ್ದಂಗೆ"[೯] ಅಲ್ಲದೆ ಪಸಂದ, ನಮ್ಮೈದ, ಎಂಬ ಮಾತುಗಳು ಗ್ರಾಮ್ಯ ಭಾಷೆಯ ದನಿಯನ್ನು ಯಥಾವತ್ತಾಗಿ ಪರಿಚಯಿಸುತ್ತದೆ. ಬೇದಿಯಮ್ಮ ಗೆಂಡೆತಿಮ್ಮನನ್ನು ಬೈಯ್ಯುವಾಗ "ಏನಂದೆ ನನ್ನ ಸವತೆತ್ತ ಮಗನೆ? ನನಗೆ ತಿರಕ್ಕಂಡು ಮಾತಾಡಂಗಾದ್ಯ......"[೧೦] ಇಂತಹ ಕಡೆ ಲೇಖಕರು ಯಾವುದೇ ಮಡಿವಂತಿಕೆ ಇಲ್ಲದೆ ಭಾಷೆಯನ್ನು ಸಮರ್ಥವಾಗಿ ಬಳಸಿಕೊಂಡಿರುವುದು ಅನನ್ಯವೆನಿಸುತ್ತದೆ.

'ಭುಜಂಗಯ್ಯನ ದಶಾವತಾರಗಳು' ಈ ಕಾದಂಬರಿಯನ್ನು ಬೃಹತ್ ಕಾದಂಬರಿಯನ್ನಾಗಿ ಮಾಡಬೇಕೆಂಬ ಮಹತ್ವಾಕಾಂಕ್ಷೆಯನ್ನು ಆಲನಹಳ್ಳಿಯವರು ಹೊತ್ತಿದ್ದರಿಂದ ಮೊದಲೆರಡು ಕಾದಂಬರಿಗಳಿಗಿಂತ ವಸ್ತು, ವಿಷಯ, ಭಾಷೆ, ಶೈಲಿ, ಪಾತ್ರಗಳ ಸಂಖ್ಯೆ ಹಾಗೂ ಆಶಯಗಳ ದೃಷ್ಟಿಯಿಂದ ಸಾಕಷ್ಟು ಭಿನ್ನವಾಗಿದೆ. ಈ ಕಾದಂಬರಿಯನ್ನು ಬರೆಯುವ ಕಾಲಕ್ಕೆ ಸಾಹಿತ್ಯಕವಾಗಿ ಮತ್ತು ಮಾನಸಿಕವಾಗಿ ಮಾಗಿದ್ದರು. ಈ ಕೃತಿಯು 'ಕಾಡು' ಮತ್ತು 'ಪರಸಂಗದ ಗೆಂಡೆತಿಮ್ಮ' ಕಾದಂಬರಿಗಳಿಗಿಂತ ಹೆಚ್ಚಿನ ಸಮೃದ್ಧ ವಿವರಗಳನ್ನು ಒಳಗೊಂಡಿದೆ.

ಆಲನಹಳ್ಳಿಯವರ ಸಾಹಿತ್ಯ ಮೂಲಭೂತವಾಗಿ ಸಂಕ್ರಮಣ ಸ್ಥಿತಿಯ ಸಾಹಿತ್ಯ. ಅದರಲ್ಲಿ ಪರಿವರ್ತನೆ ಭೆಳವಣಿಗೆ, ನಾಗರೀಕತೆಯ ಶೋಧನೆ-ಮುಂತಾದವುಗಳ ತುಡಿತವಿದ್ದು ಪ್ರಗತಿಪರವಾದ ಬದುಕಿನ ಕಡೆ ಹೊರಳುವ ಆಶಯವಿದೆ. ಇಲ್ಲಿ ಭುಜಂಗಯ್ಯನು ಪ್ರಮುಖ ಪಾತ್ರವಾಗಿದ್ದಾನೆ. ಇಡೀ ಕಾದಂಬರಿಯು ಅವನ ಬದುಕಿನ ಸುತ್ತಮುತ್ತವೇ ಹೆಣೆದುಕೊಂಡಿದೆ. "ಸಾಮಾನ್ಯ ಮನುಷ್ಯನ ಬದುಕನ್ನು ಬಗೆಯುತ್ತ ಹೋದಂತೆ ಅದು ಅಸಾಧಾರಣವೆನ್ನಿಸಿ ಅಪೂರ್ವ ಅನುಭವವನ್ನುಂಟುಮಾಡುವ ವಸ್ತುವನ್ನುಳ್ಳ ಈ ಕಾದಂಬರಿ 'ಸಾಮಾನ್ಯನೊಬ್ಬನ ಬದುಕಿನ ಮಹಾಕಾವ್ಯ' ಎನಿಸುತ್ತದೆ. ವ್ಯಕ್ತಿಯು ಒಂದು ಬಗೆಯ ಅನಿವಾರ್ಯ ಪರಿಸ್ಥಿತಿಯಲ್ಲಿ ಕೃಷಿ ಸಂಸ್ಕೃತಿಯಿಂದ ವ್ಯಾಪಾರ ಸಂಸ್ಕೃತಿಯನ್ನು ಸೇರಬಯಸುವುದರಿಂದ ಊಳಿಗಮಾನ್ಯ ವ್ಯವಸ್ಥೆ ಮತ್ತು ವ್ಯಾಪಾರೀ ಸಂಸ್ಕೃತಿಗಳ ಸಮನ್ವಯ ವಸ್ತುವನ್ನೊಳಗೊಂಡ ಕಾದಂಬರಿಯೂ ಇದಾಗಿದೆ"[೧೧].

ಆಲನಹಳ್ಳಿಯವರ ಭುಜಂಗಯ್ಯನು ಗೆಂಡೆತಿಮ್ಮನಂತೆ ಬೆರಗುಗಣ್ಣಿನಿಂದ ನಾಗರೀಕತೆಯನ್ನು ನೋಡದೆ, ಪೂರ್ವಾಪರವೆಲ್ಲ ಆಲೋಚಿಸಿಯೇ ಯಾವ ಅಡೆತಡೆಗಳಿಗೂ

ಜಗ್ಗದೆ ಹೋಟೆಲಿಟ್ಟು ತಾನು ಉದ್ಧಾರವಾಗುವುದರ ಜೊತೆಗೆ ತಾನು ಬದುಕಿದ ಪರಿಸರವನ್ನು ಸುಧಾರಿಸಬೇಕೆನ್ನುವ ಹಂಬಲ ಹೊತ್ತವನಾಗಿದ್ದಾನೆ. ಇವನ ಈ ಪ್ರಯತ್ನಗಳಿಗೆ ಊರಿನ ಪಟ್ಟಭದ್ರ ಹಿತಾಶಕ್ತಿಗಳು ತಂದೊಡ್ಡುವ ಅಡ್ಡಿ ಆತಂಕಗಳನ್ನು ತನ್ನ ನೈತಿಕ ಹಾಗೂ ಬೌದ್ಧಿಕವಾದ ಸಾಮರ್ಥ್ಯದಿಂದಲೇ ಎದುರಿಸುತ್ತಾನೆ. ಇಲ್ಲಿ ಆಲನಹಳ್ಳಿಯವರು ಬದುಕಿನ ಸ್ಥಿತ್ಯಂತರಗಳನ್ನು ಸೂಕ್ಷ್ಮವಾಗಿ ನಿರೂಪಿಸಿರುವುದನ್ನು ಕಾಣುತ್ತೇವೆ. ಆಲನಹಳ್ಳಿಯವರು ಈ ಕಾದಂಬರಿಯಲ್ಲಿ ಬರುವ ಹೋಟೆಲಿನಂತಹ ಹೊಸ ಉದ್ದಿಮೆಯನ್ನು ಕುರಿತ ಸಹಜವಾದ ವಿವರಗಳನ್ನೇ ನೀಡಿದ್ದಾರೆ. ಈ ನೆಲದಲ್ಲಿ ಅದರ ಅನಿವಾರ್ಯತೆಯನ್ನು ಸಹಜವಾಗಿ ಗುರುತಿಸಿದ್ದಾರೆ. ಈ ಕಾದಂಬರಿಯಲ್ಲಿ ಶಿವಾಚಾರದವರಾಗಿ ಎಂಜಲು ತೊಳೆಯಬಾರದೆಂಬ ಅಳುಕು ಇದ್ದರೂ ಉತ್ತಮವಾಗಿ ಬದುಕಬೇಕಾದರೆ ಜಾತಿಯ ಕಟ್ಟುಕಟ್ಟಳೆಗಳನ್ನು ಮೀರುವುದು ಅನಿವಾರ್ಯವೆಂಬ ಧ್ವನಿ ಇದೆ. ಮುಂದೆ, ಹೋಟೆಲ್ ಇಟ್ಟ ಭುಜಂಗಯ್ಯ ಬದಲಾವಣೆಯಾಗಿ ಊರಿನಲ್ಲಿ ಅವಸು ಪ್ರಮುಖ ವ್ಯಕ್ತಿಯಾದುದ್ದನ್ನು ಲೇಖಕರು ವಿವರಿಸಿದ್ದಾರೆ. ಭುಜಂಗಯ್ಯನ ವಿಭಿನ್ನ ಆಸಕ್ತಿಯ ವ್ಯಕ್ತಿತ್ವವನ್ನು ಪರಿಚಯಿಸುವುದಕ್ಕಾಗಿ ಹಲವು ಹಾಸ್ಯ ಪ್ರಸಂಗಗಳನ್ನು ದೀರ್ಘವಾಗಿಯೇ ತರುತ್ತಾರೆ.

ಆಲನಹಳ್ಳಿಯವರು ಅಂತರ ಜಾತಿಯ ವಿವಾಹದಿಂದ ಹಳ್ಳಿಗಾಡಿನಲ್ಲಿ ಉಂಟಾಗುವ ಪರಿಣಾಮಗಳನ್ನೆಲ್ಲ ಸಹಜವಾಗಿ ಈ ಕಾದಂಬರಿಯಲ್ಲಿ ನಿರೂಪಿಸಿದ್ದಾರೆ. ಲೇಖಕರು ಗ್ರಾಮೀಣ ಸಮಾಜದಲ್ಲಿ ಕಟ್ಟಾ ಜಾತಿವಾದಿಗಳು, ಖದೀಮರೂ ಇರುವಂತೆಯೇ ಮಾನವೀಯ, ಹೃದಯವಂತ ವ್ಯಕ್ತಿಗಳೂ ಇರುತ್ತಾರೆಂಬುದನ್ನು ಈ ರೀತಿಯ ಪಾತ್ರ ಮತ್ತು ಕರೀಗೌಡ, ಮುದ್ದೇಗೌಡರಂತಹ ಪಾತ್ರಗಳ ಮೂಲಕ ಪರಿಚಯಮಾಡಿಕೊಡುತ್ತಾರೆ. ಸುಶೀಲೆಯ ಪಾತ್ರ ಕಾದಂಬರಿಯಲ್ಲಿ ಪ್ರಧಾನ ಬೆಳವಣಿಗೆಯನ್ನು ಪಡೆದುಕೊಳ್ಳುತ್ತದೆ. ಸುಶೀಲಳು ಬದುಕಿನ ಎಲ್ಲಾ ಸಾಧ್ಯತೆಗಳನ್ನು ಎದುರಿಸಿ, ಜೀವಂತಿಕೆಯಿಂದ ಉಳಿಯುವ ಮನೋಭಾವದ ಪಾತ್ರವಾಗಿ ಚಿತ್ರಿತವಾಗಿರುವುದು ಮಹತ್ವಪೂರ್ಣವಾಗಿದೆ. ಭುಜಂಗಯ್ಯ ಕಣ್ಣು ಕಳೆದುಕೊಂಡ ನಂತರ ಇದೆಲ್ಲವೂ ಶಿವನಲೀಲೆ ಎಂದು ಭಾವಿಸಿ ಆಧ್ಯಾತ್ಮಿಕ ಜೀವನವನ್ನು ಬದುಕುತ್ತಾನೆ. “ಕಾಂಚನವೆಂಬ ನಾಯ ನೆಚ್ಚಿ ನಿಮ್ಮ ನಾನು ಮರೆದೆನಯ್ಯ: ಕಾಂಚನಕ್ಕೆ ವೇಳೆಯಲ್ಲದೆ ಲಿಂಗಕ್ಕೆ ವೇಳೆಯಿಲ್ಲ ಹಡಕಿಗೆ ಮೆಚ್ಚಿದ ಸೊಣಗನು ಅಮೃತದ ರುಚಿಯ ಬಲ್ಲುದೆ ಕೂಡಲಸಂಗಮದೇವಾ”[2] ಎಂದು ಹಾಡುತ್ತಾ ಮೈ ಮರೆಯುತ್ತಾನೆ. ಇಲ್ಲಿ ಲೇಖಕರು ಭುಜಂಗಯ್ಯನನ್ನು ಆಧ್ಯಾತ್ಮಿಕ ಪುರುಷನಾಗಿ ಶರಣನಾಗಿ ಚಿತ್ರಿಸಲೆತ್ನಿಸಿದ್ದಾರೆ.

ಇಲ್ಲಿ ಮೈಸೂರು ಜಿಲ್ಲೆಯ ಹೆಗ್ಗಡದೇವನ ಕೋಟೆಯ ಸುತ್ತಮುತ್ತಲಿನ ಬದುಕಿನ ವಿವರಗಳು ಮತ್ತು ಆ ಪ್ರದೇಶದ ಗ್ರಾಮೀಣ ಭಾಷೆಯ ಸೊಗಡನ್ನು ಸಮರ್ಥವಾಗಿ ಸೆರೆಹಿಡಿದಿದ್ದಾರೆ. ಪಾತ್ರದ ಮನೋಭಾವಕ್ಕೆ ತಕ್ಕಂತೆ ಭಾಷೆಯನ್ನು ಬಳಸಿದ್ದಾರೆ. "ಎಲ್ಲಾನು ಕಂಡಿರ್ರವ್ರೆ ಯೇಳಿದ್ದು, ಆ ಸವತಿ ಸಿಕ್ಲಿ ನಡುಬೀದೀಲಿ ಅವಳಿಗೆ ಎಕ್ಕಡದ ಪೂಜೆ ಮಾಡ್ದಿದ್ರೆ ನಾನು ನಮ್ಮಪ್ಪಂಗೆ ಉಟ್ಟಿದ ಮಗಳೇ ಅಲ್ಲ' ಪಾರ್ವತಿ ತನ್ನ ಸ್ವಭಾವಕ್ಕೆ ತಕ್ಕಂತೆ ಜಕ್ಕಳ್ಳಿಯ ಭಾಷೆಯಲ್ಲಿ ಮಾತಾಡುವುದು ಹಾಗೂ ಸವತಿ ಮತ್ಸರವು ವ್ಯಕ್ತವಾಗಿರುವುದು ಸಹಜವಾಗಿ ಬಂದಿದೆ.

ಇಲ್ಲಿನ ಸ್ತ್ರೀ ಪಾತ್ರಗಳು ದೇವತೆಯಾಗಿ ಮೇಲೇರಿದವುಗಳಲ್ಲ. ರಕ್ಕಸಿಯಾಗಿ ಮೆರೆದವರಲ್ಲ. ತಾವು ಬದುಕುವ ಪರಿಸರದಲ್ಲಿ ತಮಗೆ ತೋಚಿದಂತೆ ಬದುಕುವ ಯತಾರ್ಥ ಚಿತ್ರವೆಂಬಂತೆ ಚಿತ್ರಿತವಾಗಿದ್ದಾರೆ. ಒಟ್ಟಾರೆ "ಇವರ ಕಥೆಗಳಲ್ಲಿ ಬರುವ ನಾಯಕಿಯರು ಕಾಮವೆಂಬ ಮೌಲ್ಯದ ಅರ್ಥಶೋಧನೆಗೆ ನೆರವಾಗುವ ಉಪಕರಣವಾಗಿ ಮಾತ್ರ ಉಳಿದರೆ ಇವರ ಕಾದಂಬರಿಗಳಲ್ಲಿ ಬರುವ ಸ್ತ್ರೀ ಪಾತ್ರಗಳು ಭಾವನಾಮಯವಾದ, ಪ್ರೇಮವೆಂಬ ಮೌಲ್ಯವನ್ನು ಗೌರವಿಸುವ ಪಾತ್ರಗಳಾಗಿವೆ"[೧೩].

ಸ್ತ್ರೀ ಪಾತ್ರಗಳ ಗುಣ ಮತ್ತು ಸ್ವಭಾವಗಳಲ್ಲಿ ಈ ಮೂರು ಕಾದಂಬರಿಗಳಲ್ಲೂ ಕೆಲವು ಸಾಮ್ಯತೆ ಹಾಗೂ ಭಿನ್ನತೆಗಳನ್ನು ಗುರುತಿಸಬಹುದು. 'ಕಾಡು'ವಿನಲ್ಲಿಯ ಗಂಡನ ಮಾತಿಗೆ ಎದುರು ಮಾತಾಡದಂತಹ, ಅಸಹಾಯಕಳಾಗಿ ಜೀವನವಿಡೀ ಸುಖ ಪಡದಂತಹ ಕಮಲಮ್ಮನ ಪಾತ್ರ ಬಂದರೆ, 'ಭುಜಂಗಯ್ಯನ ದಶಾವತಾರ'ದಲ್ಲಿ ಬರುವ ಪಾರ್ವತಿಯು ಗಂಡನಿಗೆ ಜೋರು ಮಾಡುವ, ಪ್ರಶ್ನಿಸುವ, ಸ್ವಾಭಿಮಾನವನ್ನು ಪ್ರದರ್ಶಿಸುವ ಮಹಿಳೆಯಾಗಿದ್ದಾಳೆ. ಸುಶೀಲೆಯು ತ್ಯಾಗಮಯಿಯೂ ಮಾಗುವಿಕೆಯನ್ನು ಕಂಡುಕೊಂಡ ಮಹಿಳೆಯೂ ಆಗಿದ್ದಾಳೆ. "ಪರಸಂಗದ ಗೆಂಡೆತಿಮ್ಮ"ದಲ್ಲಿ ಬರುವ ಮರಂಕಿಯು ಗಂಡನ ಇಷ್ಟಾನಿಷ್ಟಗಳನ್ನು ಅರಿತವಳಾದರೂ ಸುಶೀಲೆಯಷ್ಟು ತ್ಯಾಗಮಯಿ ಅಲ್ಲ. ಇದಕ್ಕೆ ಅವರು ಬೆಳೆದುಬಂದ ಸಾಂಸ್ಕೃತಿಕ ಹಿನ್ನೆಲೆ ಪ್ರಮುಖ ಕಾರಣವಾಗುತ್ತದೆ. ಒಟ್ಟಾರೆ ಈ ಮೂರು ಕಾದಂಬರಿಗಳಲ್ಲೂ ಸ್ತ್ರೀಯರು ಪುರುಷ ಪ್ರಧಾನತೆಯ ಮಬ್ಬಿನಲ್ಲಿ ಮುಸುಕಾಗಿಯೇ ಬದುಕಿದವರಾಗಿದ್ದಾರೆ.

ಮೂಲಭೂತವಾಗಿ ಕಾದಂಬರಿಕಾರನಾದ ಆಲನಹಳ್ಳಿಯವರು ತಮ್ಮ ಬಾಲ್ಯದಲ್ಲಿ ಕಂಡುಂಡ ಅನುಭವಗಳನ್ನು ಸಾಕ್ಷಿಪ್ರಜ್ಞೆಯಿಂದ, ದಟ್ಟವಾದ ವಿವರಗಳ ಹಿನ್ನೆಲೆಯಲ್ಲಿ

ಅದ್ಭುತವಾದ ಮಾರ್ದವತೆಯ ಪ್ರತಿಭಾಶಕ್ತಿಯಿಂದ ಸೆರೆ ಹಿಡಿದಿದ್ದಾರೆ. ಈ ದೃಷ್ಟಿಯಿಂದ ನಮ್ಮ ಪ್ರತಿಭಾವಂತ ಲೇಖಕರಾದ ಪಿ. ಲಂಕೇಶರು "ನಿರಕ್ಷರತೆಯ ಹಿನ್ನೆಲೆಯಿಂದ ಬಂದ ಕೃಷ್ಣ ಅದೆಷ್ಟು ಚೆನ್ನಾಗಿ ಬರೆದ ಈತನ 'ಕಾಡು' ಕೃಷ್ಣ ಮಗುವಾಗಿದ್ದಾಗ ಕಂಡ ಪ್ರೀತಿ, ಕ್ರೌರ್ಯ, ಸೇಡಿನ ಪರಿಣಾಮಕಾರಿ ವೃತ್ತಾಂತ; ಈತನ 'ಗೆಂಡೆತಿಮ್ಮ' ಕೃಷ್ಣ ಮೆಚ್ಚುವ ಮೌಲ್ಯಗಳ, ಮುಗ್ಧತೆಯ ಆದರೆ ಭೀಕರ ದುರಂತದ ಚಿತ್ರಣ. ಕೃಷ್ಣನ ಬರಹದಲ್ಲಿ ಜೀವವಿತ್ತು, ತೇವವಿತ್ತು; ಆತನ ಮನಸ್ಸಿನ ಪ್ರತಿಭೆಯೊಂದಿಗೆ ಅವನ ಸಾಲುಗಳು ಹೊಮ್ಮುತ್ತಿದ್ದವು"[೧೪] ಎಂದು ವಿಶ್ಲೇಷಿಸಿದ್ದಾರೆ. ಈ ಮಾತುಗಳು ಶ್ರೀಕೃಷ್ಣ ಆಲನಹಳ್ಳಿಯವರಂತಹ ಪ್ರತಿಭಾವಂತ ಲೇಖಕರ ಬರವಣಿಗೆಯ ಮಹತ್ವವನ್ನು ಸೂಕ್ತವಾಗಿ ವಿವರಿಸುತ್ತವೆ.

ಇವರ ಮೂರು ಕಾದಂಬರಿಗಳ ಅಂತ್ಯ ದುರಂತದಲ್ಲಿ ಕೊನೆಗಾಣುವುದನ್ನು ನೋಡಬಹುದು. ಗ್ರಾಮೀಣ ಪ್ರದೇಶದಿಂದ ಬಂದ ಬಹುಪಾಲು ಲೇಖಕರ ಬರಹಗಳಲ್ಲಿ ಈ ರೀತಿಯ ದುರಂತದ ಚಿತ್ರಣಗಳನ್ನು ನಾವು ಕಾಣಬಹುದು. "ಅಬಚೂರಿನ ಪೋಸ್ಟಾಫೀಸು", "ಮರಳಿ ಮಣ್ಣಿಗೆ", "ಡಾಂಬರು ಬಂದದ್ದು" ಮುಂತಾದ ಕೃತಿಗಳಲ್ಲಿ ಈ ಬಗೆಯ ವಿವರಗಳು ಸಾಕಷ್ಟಿವೆ

## ಅಡಿ ಟಿಪ್ಪಣಿಗಳು

೧. ಅನಿವಾರ್ಯ: ಜಿ.ಎಚ್. ನಾಯಕ; ;ಪುಟ ೭೨-೭೩; ೧೯೮೦

೨. ಆಲನಹಳ್ಳಿ ಸಣ್ಣ ಕತೆಗಳು: ಶ್ರೀಕೃಷ್ಣ ಆಲನಹಳ್ಳಿ; ಪುಟ ೪-೫;೧೯೮೬

೩. ಅದೇ : ಪು. ೬೫

೪. ಕಾಡಿನ ಹುಡುಗ ಕೃಷ್ಣ: (ಸಂ) ಡಿ.ಎಸ್. ನಾಗಭೂಷಣ ಮತ್ತು ಇತರರು ಪುಟ ೩೭;೧೯೯೦

೫. ಕಾಡು: ಶ್ರೀ ಕೃಷ್ಣ ಆಲನಹಳ್ಳಿ: ಪು. ೩೦; ೧೯೮೮

೬. ಅದೇ: ಪು. ೮೪

೭. ಅದೇ: ಪು. ೪೪

೮. ಪರಸಂಗದ ಗೆಂಡೆತಿಮ್ಮ: ಶ್ರೀ ಕೃಷ್ಣ ಆಲನಹಳ್ಳಿ: ಪು. ೧೧೧; ೧೯೭೪

೯. ಅದೇ : ಪು. ೪

೧೦. ಅದೇ: ಪು. ೬೩

೧೧. ಶ್ರೀಕೃಷ್ಣ ಆಲನಹಳ್ಳಿಯವರ ಸಾಹಿತ್ಯ : ಎಂ.ಎಸ್. ಶೇಖರ್; ಪು. ೧೬೩; ೨೦೦೨

೧೨. ಭುಜಂಗಯ್ಯನ ದಶಾವತಾರಗಳು: ಶ್ರೀ ಕೃಷ್ಣ ಆಲನಹಳ್ಳಿ: ಪು. ೪೮೪;೧ ೯೮೩

೧೩. ಶ್ರೀ ಕೃಷ್ಣ ಆಲನಹಳ್ಳಿಯವರ ಸಾಹಿತ್ಯ; ಎಂ. ಎಸ್. ಶೇಖರ್; ಪು. ೧೩೯; ೨೦೦೨

೧೪. ಲಂಕೇಶ್ ಪತ್ರಿಕೆ: ಪುಟ ೬; ೧೫-೧-೧೯೮೯

ಆಧುನಿಕ ಕನ್ನಡ ಸಾಹಿತ್ಯ ಈಗಾಗಲೇ ಹಲವಾರು ಪ್ರಮುಖ ಪಂಥಗಳನ್ನು ಒಳಗೊಂಡಿದೆ. ಇವುಗಳಲ್ಲಿ ನವೋದಯ, ಪ್ರಗತಿಶೀಲ, ನವ್ಯ, ಬಂಡಾಯ_ದಲಿತ ಪ್ರಮುಖವಾದವು. ಈ ಎಲ್ಲ ಸಾಹಿತ್ಯಕ ಪಂಥಗಳಲ್ಲಿಯೂ ಹಲವು ಮಹತ್ವದ ಲೇಖಕರು ಸಾಹಿತ್ಯ ರಚಿಸಿ, ಒಟ್ಟು ಆಧುನಿಕ ಕನ್ನಡ ಸಾಹಿತ್ಯಕ್ಕೆ ಒಂದು ಹೊಸ ತಿರುವನ್ನು ತಂದುಕೊಟ್ಟಿದ್ದಾರೆ. ನವ್ಯ ಸಾಹಿತ್ಯದ ಪ್ರಮುಖ ಲೇಖಕರ ಪ್ರಭಾವ ಹಾಗೂ ಪ್ರೇರಣೆಗಳು ಹೊಸ ತಲೆಮಾರಿನ ಯುವ ಬರಹಗಾರರ ಮೇಲೆ ದಟ್ಟವಾಗಿ ಆಗಿವೆ.

ನವ್ಯ ಸಾಹಿತ್ಯದ ಎರಡನೆ ತಲೆಮಾರಿನ ಅತ್ಯಂತ ಪ್ರತಿಭಾನ್ವಿತ ಲೇಖಕರಲ್ಲಿ ಆಲನಹಳ್ಳಿಯವರು ಪ್ರಮುಖರು. ಇವರ ಸಾಹಿತ್ಯ ಸೃಷ್ಟಿಯಲ್ಲಿ ಇವರು ಹುಟ್ಟಿ ಬೆಳೆದ ಸಾಮಾಜಿಕ ಪರಿಸರ ಮತ್ತು ಸಾಹಿತ್ಯಕ ಸಂದರ್ಭದ ದಟ್ಟವಾದ ಪ್ರಭಾವವನ್ನು ಕಾಣುತ್ತೇವೆ. ಮೂಲತಃ ಶ್ರೀಕೃಷ್ಣ ಅವರು ಪ್ರತಿಭಾವಂತರು. ಇವರು ಕಥೆ, ಕವನ, ಕಾದಂಬರಿ, ವಿಮರ್ಶೆ, ಅನುವಾದ ಮುಂತಾದ ಬಹುಮುಖ ಕ್ಷೇತ್ರಗಳಲ್ಲಿ ತೀವ್ರಾಸಕ್ತಿಯನ್ನು ಹೊಂದಿದ್ದರು. ಅಕಾಲ ಮರಣಕ್ಕೆ ಈಡಾದ ಆಲನಹಳ್ಳಿಯವರು ತಮ್ಮ ಬದುಕಿನ ಕೊನೆಯ ಗಳಿಗೆಯವರೆಗೂ ಸಾಹಿತ್ಯವನ್ನು ರಚಿಸಿದ್ದಾರೆ. ದಟ್ಟವಾದ ಗ್ರಾಮೀಣ ಬದುಕಿನ ಅನುಭವವನ್ನು ಹೊಂದಿದ್ದ ಇವರು ಇಡೀ ಕನ್ನಡ ಸಾಹಿತ್ಯದಲ್ಲೇ ಅತ್ಯಂತ ವಿಶಿಷ್ಟವಾದ ಹೆಸರನ್ನು ಮಾಡಬೇಕೆಂಬ ಮಹತ್ವಾಕಾಂಕ್ಷೆಯಿಂದ ಎಲ್ಲಾ ಪಂಥಗಳ ಶಕ್ತ ಬರಹಗಾರರನ್ನು ಆಳವಾಗಿ ಅಧ್ಯಯನ ಮಾಡಿದ್ದರು. ಅಲ್ಲದೆ ಮಲೆಯಾಳಂ, ಇಂಗ್ಲೀಷ್, ಹಿಂದಿ, ರಷ್ಯನ್ ಮುಂತಾದ ಬೇರೆ ಬೇರೆ ಭಾಷೆಗಳ ಪ್ರಸಿದ್ಧ ಲೇಖಕರನ್ನು ಓದಿಕೊಂಡು ತಮ್ಮ ಜ್ಞಾನದ ಪರಿಧಿಯನ್ನು ವಿಸ್ತರಿಸಿಕೊಂಡಿದ್ದರು. ಇವರ ಪ್ರಾರಂಭದ ಬರಹಗಳಲ್ಲಿ ನವ್ಯದ ದಟ್ಟವಾದ ಪ್ರಭಾವವನ್ನು ಗುರುತಿಸಬಹುದು. ನವ್ಯ ಸಾಹಿತ್ಯ ಮಾರ್ಗದಲ್ಲೇ ಗ್ರಾಮೀಣ ಅನುಭವಗಳನ್ನು ಅಭಿವ್ಯಕ್ತಗೊಳಿಸಿದ ವಿಶಿಷ್ಟವಾದ ಲೇಖಕರು ಇವರಾಗಿದ್ದಾರೆ. ಬಹುಪಾಲು ಬಂಡಾಯ-ದಲಿತ ಸಾಹಿತಿಗಳು ಇವರ ಆಪ್ತರೇ ಆಗಿದ್ದಾರೆ. ಜೊತೆಗೆ ಆಲನಹಳ್ಳಿಯವರಿಗೆ ಸಕಲ ವಿಷಯಗಳು ಆಪ್ತವಾದವುಗಳೇ. ತಮ್ಮನ್ನು ತೀವ್ರವಾಗಿ ಕಾಡಿದ ವಿಷಯಗಳನ್ನು ಯಾವ ಸಂಕೋಚಕ್ಕೂ ಒಳಗಾಗದ ರೀತಿಯಲ್ಲಿ ಸಮರ್ಥವಾಗಿ ಕಲೆಯಾಗಿಸಿದ್ದಾರೆ.

ಆಲನಹಳ್ಳಿಯವರ ಮೂಲ ಸೆಲೆ ಗ್ರಾಮೀಣ ಬದುಕೇ ಆಗಿದೆ. ಈ ಬದುಕು ಅವರ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ವಿಭಿನ್ನವಾಗಿ ಕಂಡುಬರುವುದನ್ನು ಗುರುತಿಸಬಹುದು. ಕಾದಂಬರಿಗಳಲ್ಲಿ ಲೇಖಕರು ತಮ್ಮ ಬಾಲ್ಯದಲ್ಲಿ ಕಂಡುಂಡ ಬದುಕಿನ ಅನುಭವಗಳು, ನೋವು

ನಲಿವುಗಳು, ಅನ್ಯಾಯ, ಅಸಮಾನತೆ, ಶೋಷಣೆ ಮುಂತಾದ ವಿವರಗಳನ್ನು ಚಿತ್ರಿಸಿದ್ದಾರೆ. ಇವರ ಕೆಲವು ಕಥೆಗಳು ಗ್ರಾಮೀಣ ಬದುಕಿನ ವಿವರಗಳನ್ನು ಒಳಗೊಂಡಿದ್ದರೆ ಬಹುಪಾಲು ಕಥೆಗಳು ನಗರದ ಮಧ್ಯಮ ವರ್ಗದ ಬದುಕಿನ ವಿವರಗಳನ್ನು ನೀಡುತ್ತವೆ. ಜೊತೆಗೆ ಕಾಮ ಇವರ ಸಾಹಿತ್ಯದಲ್ಲಿ ಪ್ರಧಾನ ಪಾತ್ರವಹಿಸುತ್ತದೆ. ಈ ಎಲ್ಲಾ ಅಂಶಗಳನ್ನು ಆಯಾಯ ಅಧ್ಯಾಯಗಳಲ್ಲಿ ವಿವರವಾಗಿ ಚರ್ಚಿಸಿದ್ದೇನೆ. ಹಳತು ಮತ್ತು ಹೊಸತರ ನಡುವಿನ ಸಂಘರ್ಷ ಆಲನಹಳ್ಳಿಯವರ ಸಾಹಿತ್ಯದಲ್ಲಿ ಕಂಡುಬರುವ ಇನ್ನೊಂದು ಪ್ರಮುಖ ಅಂಶವಾಗಿದೆ. ಇದು ಇವರ ಕಥೆಗಳಲ್ಲಿ ಹೆಚ್ಚಿನ ಮಟ್ಟದಲ್ಲಿ ಕಂಡುಬಂದರೆ, ಕಾದಂಬರಿಗಳಲ್ಲಿ ಬದುಕಿನ ಸಂದರ್ಭಕ್ಕನುಗುಣವಾಗಿ ಸಹಜವಾಗಿ ಬಂದಿದೆ. ಮಾನವೀಯ ಸಂಬಂಧಗಳು ತರುವ ನೋವಿನ ಚಿತ್ರಣ ಕೆಲವು ಕಡೆ ಕಂಡುಬರುತ್ತದೆ. ಇನ್ನು ಕೆಲವು ಪಾತ್ರಗಳಲ್ಲಿ ಮಾನವೀಯ ಸಂಬಂಧಗಳನ್ನು ಅರ್ಥಮಾಡಿಕೊಳ್ಳದೆ ಪ್ರತಿಷ್ಠೆಗಾಗಿ ಹೋರಾಡಿ ತಮ್ಮ ಬದುಕನ್ನು ವಿನಾಶದ ಅಂಚಿಗೆ ಕೊಂಡೊಯ್ಯುವ ರೀತಿಯನ್ನು ಕಾಣುತ್ತೇವೆ. ಆಲನಹಳ್ಳಿಯವರ ಸಾಹಿತ್ಯ ಮೂಲತಃ ಸಂಕ್ರಮಣ ಸ್ಥಿತಿಯ ಸಾಹಿತ್ಯ, ಸಾರ್ಥಕ ಬದುಕು ಮತ್ತು ಮಾನವೀಯವಾದ ಬದುಕಿಗೆ ತುಡಿಯುವಾಗ ಈ ರೀತಿಯ ಬದಲಾವಣೆಯನ್ನು ಆ ಜನಾಂಗವು ಅನಿವಾರ್ಯವಾಗಿ ಬಯಸುತ್ತದೆ. ಇಂತಹ ಸಂದರ್ಭಗಳಲ್ಲಿ ಅಸ್ತವ್ಯಸ್ತತೆ, ಕಾದಾಟಗಳು, ಸಾವುನೋವುಗಳು, ಸೋಲುಗೆಲುವುಗಳೆಲ್ಲವೂ ಕಂಡುಬರುತ್ತವೆ. ಇವುಗಳೆಲ್ಲವನ್ನು ಹಾಗೂ ಆ ಸಂಬಂಧದ ಇತಿಮಿತಿಗಳನ್ನು ಆಯಾಯ ಅಧ್ಯಾಯಗಳಲ್ಲಿ ವಿವರವಾಗಿ ಚರ್ಚಿಸಿದ್ದೇನೆ.

ಯಾವುದೇ ಲೇಖಕನ ಸಾಹಿತ್ಯದ ಬಗ್ಗೆ ಅಧ್ಯಯನ ನಡೆಸುವ ಸಂದರ್ಭದಲ್ಲಿ ಆತನ ವ್ಯಕ್ತಿತ್ವವನ್ನು ಅರಿಯುವುದು ಅವಶ್ಯವೆನಿಸುತ್ತದೆ. ಏಕೆಂದರೆ ಅವನು ಸೃಷ್ಟಿಸುವ ಸಾಹಿತ್ಯ ಅವನ ವ್ಯಕ್ತಿತ್ವದ ಅವಿಭಾಜ್ಯ ಅಂಗವೇ ಆಗಿರುತ್ತದೆ. ಹಾಗಾಗಿ ಯಾವುದೇ ಕೃತಿಯ ಬಗೆಗಿನ ವಿಮರ್ಶೆ, ವಿಶ್ಲೇಷಣೆಗಳುಕೃತಿಕಾರನ ಬಗೆಗಿನ ವಿಮರ್ಶೆ, ವಿಶ್ಲೇಷಣೆಗಳನ್ನೊಳಗೊಂಡಿರುವುದು ಸಾಮಾನ್ಯ ವಿಷಯವಾಗಿದೆ. ಕೃತಿಕಾರ ಹುಟ್ಟಿ ಬೆಳೆದ ಪರಿಸರ, ಬದುಕಿನ ಹಿನ್ನೆಲೆಗಳೊಂದಿಗೆ ಅವನು ಇಟ್ಟುಕೊಂಡಿರುವ ಸಂಬಂಧ, ಇವುಗಳೆಲ್ಲವೂ ಆತನ ಸಾಹಿತ್ಯದ ಹಿನ್ನೆಲೆಗಳಾಗಿಯೂ, ಆಶಯುಗಳಾಗಿಯೂ, ಕೃತಿಯಲ್ಲಿ ನಿಲ್ಲುವ ಸಂಭವ ಉಂಟು. ಈ ದೃಷ್ಟಿಯಿಂದ ಲೇಖಕನ ಸಾಹಿತ್ಯ ಮತ್ತು ಸಾಧನೆಗಳನ್ನು ಅರಿಯಬೇಕಾಗುತ್ತದೆ. ಆಲನಹಳ್ಳಿಯವರು ಹುಟ್ಟಿ ಬೆಳೆದದ್ದು ಬಡತನದ ಹಿನ್ನೆಲೆಯಲ್ಲಿ ಅದರಲ್ಲೂ ತಮ್ಮ ತಂದೆಯ ಮುಖವನ್ನೇ ನೋಡದಂತಹ ತಬ್ಬಲಿತನವನ್ನು ಅನುಭವಿಸಿದವರು. ಜಾತೀಯತೆ, ಅಸಮಾನತೆ, ನಿರಕ್ಷರತೆ, ಊಳಿಗಮಾನ್ಯ ಮನೋಭಾವ, ಅರ್ಥವಿಲ್ಲದ ಹುಸಿ ಪ್ರತಿಷ್ಠೆಗಳು ತುಂಬಿ ತುಳುಕುತ್ತಿರುವ ಪರಿಸರದಿಂದ

ಬೆಳೆದುಬಂದ ಇವರು ಸಹಜವಾಗಿಯೇ ಸಮಾಜವಾದದಿಂದ ಪ್ರಭಾವಿತರಾದರು. ಹಾಗಾಗಿ ಇವರು ಬೆಳೆದದ್ದೇ ದಲಿತರು ಹಾಗೂ ಪ್ರಗತಿಪರ ಶಕ್ತಿಗಳ ನಡುವೆ.

ಈ ದೃಷ್ಟಿಯಿಂದ ಆಲನಹಳ್ಳಿಯವರ ಸಹಪಾಠಿ ಮತ್ತು ಓರಗೆಯ ಲೇಖಕರಾದ ಡಾ. ಕಾಳೇಗೌಡ ನಾಗವಾರ ಅವರು ಈ ಲೇಖಕರನ್ನು ಆಪ್ತವಾಗಿ ಬಲ್ಲವರಾಗಿದ್ದು "ತನ್ನ ಕೆಲವು ವಿರೋಧಾಭಾಸಗಳು ಮತ್ತು ದೌರ್ಬಲ್ಯಗಳ ನಡುವೆಯೂ ಕೃಷ್ಣ ಹತ್ತಿರದಿಂದ ಬಲ್ಲ ಎಲ್ಲರ ನೆನಪಿನಲ್ಲಿ ನಿಲ್ಲುವ ಹೃದಯ ನೈರ್ಮಲ್ಯದ ಹಳ್ಳಿಯ ಮುಗ್ಧ ತರುಣನ ಸತತ ಕುತೂಹಲ ಮತ್ತು ತೀವ್ರತೆಯಲ್ಲಿ ದಟ್ಟವಾಗಿ ಬಾಳಿದ ವ್ಯಕ್ತಿಯಾಗಿದ್ದಾನೆ. ತನ್ನೆಲ್ಲ ಪರಿಪಾಟಲು, ಅಶಿಸ್ತು ಮತ್ತು ಅವ್ಯವಸ್ಥೆಯ ನಡುವೆ ಸಹ ಈತ ಆಶ್ಚರ್ಯಕರವಾದ ರೀತಿಯಲ್ಲಿ ಗಂಭೀರ ಸೃಜನಶೀಲ ಕೃತಿಗಳನ್ನು ರಚಿಸಿದ್ದಾನೆ"[1] ಎಂದು ಹೇಳಿರುವ ಮಾತುಗಳು ಮೌಲಿಕವಾದವುಗಳಾಗಿವೆ. ಒಟ್ಟಿನಲ್ಲಿ ಈ ಪ್ರತಿಭಾವಂತ ಲೇಖಕರು ಅಕಾಲ ಮರಣಕ್ಕೆ ತುತ್ತಾದದ್ದು ವಿಷಾದದ ಸಂಗತಿಯಾಗಿದೆ. ಆದರೆ ಅವರು ಕವಿಯಾಗಿ, ಕಥೆಗಾರರಾಗಿ, ಕಾದಂಬರಿಕಾರರಾಗಿ, ಕನ್ನಡ ಸಾಹಿತ್ಯಕ್ಕೆ ನೀಡಿರುವ ಕೊಡುಗೆ ಉತ್ತಮ ಮಟ್ಟದ್ದಾಗಿರುವುದು ಹೆಮ್ಮೆಯ ವಿಷಯವಾಗಿದೆ.

ಕಥೆಗಾರರಾಗಿಯೂ ಆಲನಹಳ್ಳಿಯವರಿಗೆ ಆಧುನಿಕ ಕನ್ನಡ ಕಥಾಕ್ಷೇತ್ರದಲ್ಲಿ ಒಂದು ವಿಶಿಷ್ಟ ಸ್ಥಾನವಿದೆ. ಜೀವನದ ಬಗ್ಗೆ ಹೆಚ್ಚಿನ ಅರಿವನ್ನು ಮೂಡಿಸುವಲ್ಲಿ ಆಲನಹಳ್ಳಿಯವರು ಕೆಲವೇ ಕೆಲವು ಕಥೆಗಳಲ್ಲಿ ಮಾತ್ರ ಸಫಲರಾಗುತ್ತರೆ. ಇನ್ನು ಕೆಲವು ಕಡೆ ನಿರೂಪಣೆಯು ಕೇವಲ ಸಂಘರ್ಷದ ಮಟ್ಟದಲ್ಲೇ ಉಳಿಯುತ್ತದೆ. "ಇವರ ಸಮಕಾಲೀನ ಕಥೆಗಾರರಾದ ಬೆಸಗರಹಳ್ಳಿ ರಾಮಣ್ಣ, ಕಾಳೇಗೌಡ ನಾಗವಾರ, ದೇವನೂರು ಮಹಾದೇವ ಮುಂತಾದವರು ಸಹಾ ಗ್ರಾಮೀಣ ಬದುಕಿನ ಚಿತ್ರಣಗಳನ್ನು ತಮ್ಮ ಕಥೆಗಳಲ್ಲಿ ತರುತ್ತಾರೆ. ಆದರೂ ಇವರೆಲ್ಲರೂ ಆಲನಹಳ್ಳಿಯವರ ದೃಷ್ಟಿಗಿಂತ ಭಿನ್ನರಾಗುತ್ತಾರೆ. ಬೆಸಗರಹಳ್ಳಿಯವರು ತಮ್ಮ ಕಥೆಗಳಲ್ಲಿ ಸಮಾಜದಲ್ಲಿ ನಡೆಯುವ ಶೋಷಣೆ, ಕ್ರೌರ್ಯ ಮುಂತಾದ ಅಂಶಗಳ ವಿರುದ್ಧ ಮಧ್ಯಮ ವರ್ಗವು ದನಿಯೆತ್ತುವ, ಪ್ರತಿಭಟಿಸುವ ಚಿತ್ರಣಗಳನ್ನು ತರುತ್ತಾರೆ. ನಾಗವಾರರು ಬಂಡಾಯ ಮನೋಧರ್ಮದ ಲೇಖಕರಾದರೂ ಅದನ್ನು ಹೆಚ್ಚು ಆಕ್ರೋಶ, ರೊಚ್ಚುಗಳ ಮೂಲಕ ವ್ಯಕ್ತಪಡಿಸದೆ ಅತ್ಯಂತ ಆತ್ಮೀಯತೆ ಹಾಗೂ ಪ್ರೀತಿ ಮತ್ತು ನಿರ್ಭೀತಿಯ ಮೂಲಕ ಆರೋಗ್ಯವಾದುದ್ದರ ಕಡೆಗೆ ತುಡಿಯುವ ಯುವ ಮನಸ್ಸುಗಳ ಹಿನ್ನೆಲೆಯಲ್ಲಿ ಚಿತ್ರಿಸುತ್ತಾರೆ. ಇಲ್ಲಿ ಪ್ರೀತಿಯಿಂದಲೇ ಸಮಾಜದಲ್ಲಿ ಬದಲಾವಣೆಯನ್ನು ಕಾಣಲು ಸಾಧ್ಯವೆನ್ನುವ ಹಂಬಲವನ್ನು ಹೊತ್ತ ಪಾತ್ರಗಳಿವೆ. ಮಹಾದೇವರ ಕಥೆಗಳಲ್ಲಿ ದಲಿತ ಸಂವೇದನೆಯ ಮೂಲಕ

ನವ್ಯ ಚೌಕಟ್ಟಿನಲ್ಲಿ ಅತ್ಯಂತ ನಿರ್ಲಿಪ್ತನಾಗಿ ಮಾನವೀಯ ಸಂಬಂಧಗಳು ಚಿತ್ರಿತವಾಗಿರುವುದನ್ನು ಕಾಣುತ್ತೇವೆ. ಆಲನಹಳ್ಳಿಯವರು ತಮ್ಮ ಕಥೆಗಳಲ್ಲಿ ನವ್ಯದ ರೀತಿಯ ಬರವಣಿಗೆಯ ಮೂಲಕ ಕಾಮವನ್ನು ಪ್ರಧಾನ ಅಂಶವಾಗಿಟ್ಟಿಕೊಂಡು ಈ ಹಿನ್ನೆಲೆಯಿಂದಲೇ ಮಾನವೀಯ ಸಂಬಂಧಗಳನ್ನು ಶೋಧಿಸುತ್ತಾರೆ"[3] ಜಾತೀಯತೆ, ಮಡಿವಂತಿಕೆ, ವಯಸ್ಸು, ಅಂತಸ್ತುಗಳನ್ನು ಮೀರಿ ಮಾನವ ಸಂಬಂಧಗಳನ್ನು ಶೋಧಿಸುವ ಬಗೆಯು ಇವರ ಕಥೆಗಳಲ್ಲಿ ಕಂಡುಬರುತ್ತವೆ.

ಮೂಲಭೂತವಾಗಿ ಆಲನಹಳ್ಳಿಯವರು ಕಾದಂಬರಿಕಾರರು. ಇವರು ಸಾರ್ಥಕ ಕವಿತೆ ಹಾಗೂ ಕಥೆಗಳನ್ನು ಬರೆದಿರುವವರಾದರೂ ಅವರ ಸೃಜನಶೀಲ ಸತ್ವವನ್ನು ಕಾದಂಬರಿಗಳಲ್ಲಿ ಇನ್ನಷ್ಟು ದಟ್ಟವಾಗಿ ಕಾಣಬಹುದು. ಅವರು ಒಂದೊಂದು ಕಾದಂಬರಿಯಲ್ಲಿ ಒಂದೊಂದು ಗ್ರಾಮೀಣ ಚಿತ್ರಣವನ್ನು ಕಟ್ಟಿಕೊಟ್ಟಿದ್ದಾರೆ. "ಆಲನಹಳ್ಳಿಯವರು, ಜನಪ್ರಿಯತೆಯು ಒಂದು ದೋಷ ಎಂದು ಪರಿಗಣಿಸುತ್ತಿದ್ದ ಕಾಲದಲ್ಲಿ, ಇದೇ ಜನಪ್ರಿಯತೆಯು ಸತ್ವಶಾಲಿ ಲೇಖಕರ ಗುಣವೂ ಆಗಬಹುದೆಂಬುದನ್ನು ಸಾಧಿಸಿ ತೋರಿಸಿದ ವಿರಳ ಕಾದಂಬರಿಕಾರರಲ್ಲಿ ಒಬ್ಬರಾಗಿದ್ದಾರೆ"[4] ಸತ್ವ ಮತ್ತು ಮೌಲಿಕತೆಗಳ ದೃಷ್ಟಿಯಿಂದಲೂ ಆಲನಹಳ್ಳಿಯವರು ಪ್ರಮುಖ ಕಾದಂಬರಿಕಾರರಾಗಿ ಉಳಿಯುತ್ತಾರೆ.

ಕಾಡು ಕಾದಂಬರಿ ಎಷ್ಟು ಜನಪ್ರಿಯವಾಗಿದೆಯೆಂದರೆ ಕನ್ನಡದಲ್ಲಿ ಹಲವು ಮುದ್ರಣಗಳನ್ನು ಕಾಣುವುದರೊಂದಿಗೆ, ಭಾರತದ ಹೆಚ್ಚಿನ ಭಾಷೆಗಳಿಗೆ ಅನುವಾದವಾಗಿದೆ. ಅಲ್ಲದೇ ಯೂರೋಪಿಯನ್ ಹಾಗೂ ರಷ್ಯನ್ ಭಾಷೆಗಳಿಗೂ ಅನುವಾದವಾಗಿ ಅಂತರಾಷ್ಟ್ರೀಯ ವ್ಯಾಪ್ತಿಯ ಪ್ರಸಿದ್ಧಿಯನ್ನು ಗಳಿಸಿದೆ. ಇವರು ಮೂರು ಕಾದಂಬರಿಗಳೂ ನೆರೆಯ ಮಲೆಯಾಳಂ ಭಾಷೆಗೆ ಅನುವಾದಗೊಂಡು ಅಲ್ಲಿನ ಓದುಗರು ಮತ್ತು ವಿಮರ್ಶಕರನ್ನು ಆಕರ್ಷಿಸಿ ಅಲ್ಲಯೂ ಪುನರ್ ಮುದ್ರಣಗಳನ್ನು ಕಂಡಿರುವ ಹೆಗ್ಗಳಿಕೆಯ ಕೃತಿಗಳಾಗಿವೆ. ಅಲ್ಲದೇ ಇವರು ಬರೆದಿರುವ ಮೂರು ಕಾದಂಬರಿಗಳು ಸಹ ಕನ್ನಡದಲ್ಲಿ ಚಲನಚಿತ್ರವಾಗಿಯೂ ಹೆಸರು ಮಾಡಿವೆ.

ಶ್ರೀ ಕೃಷ್ಣ ಅವರು ತಮ್ಮ ಕಾದಂಬರಿಗಳಲ್ಲಿ ಮೈಸೂರು ಮತ್ತು ಹೆಗ್ಗಡದೇವನಕೋಟೆಯ ಸುತ್ತಮುತ್ತಲಿನ ಬದುಕಿನ ವಿವರಗಳನ್ನು ಕಟ್ಟಕೊಡುತ್ತಾರೆ. ಒಂದು ಪ್ರಾದೇಶಿಕವಾದ ಬದುಕಿನ ಸೊಗಡನ್ನು ತಮ್ಮದೇ ಆದ ವೈಶಿಷ್ಟ್ಯದಿಂದ, ಪರಿಣಾಮಕಾರಿಯಾಗಿ ಚಿತ್ರಿಸುತ್ತಾರೆ. ಆಲನಹಳ್ಳಿಯವರು ಅಕಾಲ ಮರಣಕ್ಕೆ ತುತ್ತಾದುದ್ದರಿಂದ ಅಪೂರ್ಣವಾಗಿರುವ

ಅವರ ಎರಡು ಕಾದಂಬರಿಗಳನ್ನು ನನ್ನ ಪ್ರಬಂಧದಲ್ಲಿ ಅವುಗಳ ಕಿರುಪರಿಚಯವನ್ನು ಮಾತ್ರ ಮಾಡಿದ್ದೇನೆ. ಶ್ರೀಕೃಷ್ಣ ಅವರು ಕಾದಂಬರಿ ಕ್ಷೇತ್ರದಲ್ಲಿ ದೊಡ್ಡ ಸಾಧನೆ ಮಾಡಿರುವರಾದ್ದರಿಂದ ಅವರ ಕಾದಂಬರಿಗಳ ಮುಖ್ಯ ಸತ್ವವನ್ನು ಚರ್ಚಿಸಿದ್ದೇನೆ.

ಆಲನಹಳ್ಳಿಯವರು ಮೂಲತಃ ಸೃಜನಶೀಲ ಬರಹಗಾರರಾಗಿ ದೊಡ್ಡ ಸಾಧನೆ ಮಾಡುವುದರ ಜೊತೆಗೆ ಉತ್ತಮ ಸಾಹಿತ್ಯಕ ಪರಿಸರವನ್ನೂ ನಿರ್ಮಾಣ ಮಾಡುವಲ್ಲಿ ಗಣನೀಯವಾದ ಸೇವೆಯನ್ನು ಸಲ್ಲಿಸಿದ್ದಾರೆ. ಒಟ್ಟಾರೆ ತುಂಬು ಲವಲವಿಕೆಯಿಂದ ಕೂಡಿ ದಟ್ಟವಾದ ಜೀವನ ಪ್ರೀತಿಯುಳ್ಳ ಪ್ರತಿಭಾನ್ವಿತ ಲೇಖಕರು ಇವರು ಅಕಾಲ ಮರಣಕ್ಕೆ ತುತ್ತಾದದ್ದು ತುಂಬಾ ನೋವಿನ ಸಂಗತಿಯಾಗಿದೆ. ಆದರೂ ಸುಮಾರು ಕಾಲು ಶತಮಾನಗಳ ಕಾಲ ಕವಿ, ಕಥೆಗಾರ,ಕಾದಂಬರಿಕಾರ, ವಿಮರ್ಶಕ, ಅನುವಾದಕರಾಗಿ ದುಡಿದು ಕನ್ನಡ ಸಾಹಿತ್ಯಕ್ಕೆ ಉತ್ತಮ ಮಟ್ಟದ ಕೊಡುಗೆಯನ್ನು ನೀಡಿದ್ದಾರೆ. ಆದ್ದರಿಂದ ಸಾಹಿತ್ಯ ಕ್ಷೇತ್ರದಲ್ಲಿ ಹೆಮ್ಮೆಪಟ್ಟುಕೊಳ್ಳುವ ಸಾಧನೆಯ ಹೆಸರಾಗಿ ಶ್ರೀ ಕೃಷ್ಣ ಆಲನಹಳ್ಳಿಯವರು ಉಳಿದಿದ್ದಾರೆ.

ಒಟ್ಟಾರೆಯಾಗಿ ಇದು ತಲಸ್ಪರ್ಶಿ ಅಧ್ಯಯನ ಎಂದು ಹೇಳಲಾರೆ, ಆದರೆ ಈ ಅಧ್ಯಯನ ಒಂದು ರೀತಿಯಲ್ಲಿ ಮಹತ್ವ ಉಳ್ಳದ್ದಾಗಿದೆ ಎಂಬುದಂತೂ ನಿಜ.

## ಅಡಿ ಟಿಪ್ಪಣಿಗಳು

೧. ಪುಸ್ತಕ ಪ್ರಪಂಚ: (ಸಂ) ದೇಜಗೌ; ಪು. ೨೩; ೧೯೮೯

೨. ಶ್ರೀ ಕೃಷ್ಣ ಆಲನಹಳ್ಳಿಯವರ ಸಾಹಿತ್ಯ: ಎಂ.ಎಸ್. ಶೇಖರ್. ಪು. ೨೪೬; ೨೦೦೨

೩. ಅದೇ; ಪು. ೨೪೭ ; ೨೦೦೨

# ಗ್ರಂಥಋಣ

## ಆಕರ ಗ್ರಂಥಗಳು


ಕಥಾ ಸಂಕಲನಗಳು : ತಪ್ತ : ನೆಲಮನೆ ಪ್ರಕಾಶನ,
ಮೈಸೂರು; ೧೯೭೦.

ಫೀನಿಕ್ಸ್ : ತ.ವೆಂ. ಸ್ಮಾರಕ ಗ್ರಂಥಮಾಲೆ,
ಮೈಸೂರು; ೧೯೭೫

ಆಲನಹಳ್ಳಿ ಸಣ್ಣ ಕಥೆಗಳು ; ಐಬಿಎಚ್ ಪ್ರಕಾಶನ,
ಬೆಂಗಳೂರು;೧೯೮೬

ಕಾದಂಬರಿಗಳು : ಕಾಡು : ನೆಲಮನೆ ಪ್ರಕಾಶನ,
ಮೈಸೂರು; ೧೯೭೧

ಪರಸಂಗದ ಗೆಂಡೆತಿಮ್ಮ : ಐಬಿಎಚ್. ಪ್ರಕಾಶನ,
ಬೆಂಗಳೂರು; ೧೯೮೫ (೫ನೇ ಮುದ್ರಣ)

ಭುಜಂಗಯ್ಯನ ದಶಾವತಾರಗಳು :
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ,
ಬೆಂಗಳೂರು; ೧೯೮೫.

# ಪರಾಮರ್ಶನ ಗ್ರಂಥಗಳು


ನಾಗಭೂಷಣ ಡಿ.ಎಸ್ (ಸಂ) : ಕಾಡಿನ ಹುಡುಗ ಕೃಷ್ಣ : ಸಂವಾದ ಪ್ರಕಾಶನ ಮಲ್ಲಾಡಿಹಳ್ಳಿ, ಚಿತ್ರದುರ್ಗ ಜಿಲ; ೧೯೮೦

ಜವರೇಗೌಡ. ದೇ (ಸಂ) : ಪುಸ್ತಕ ಪ್ರಪಂಚ: ಶ್ರೀ ಕೃಷ್ಣ ಆಲನಹಳ್ಳಿ ವಿಶೇಷ ಸಂಚಿಕೆ; ಸಂ. ೪೨, ಸಂ. ೭-೮; ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ; ಮೈಸೂರು ; ೧೯೮೭

ಕರ್ನಾಟಕ ಸಾಹಿತ್ಯ ಅಕಾಡೆಮಿ : ಸಂಸ್ಕೃತಿಯ ಸ್ಥಿತ್ಯಂತರ ಮತ್ತು ಶ್ರೀಕೃಷ್ಣ ಆಲನಹಳ್ಳಿಯವರ ಸಾಹಿತ್ಯ; ೧೯೯೨

ಪುರುಷೋತ್ತಮ ಬಿಳಿಮಲೆ : ಬಂಡಾಯ-ದಲಿತ ಸಾಹಿತ್ಯ: ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು; ೧೯೯೨

ಎಂ.ಎಸ್. ಶೇಖರ್ : ಶ್ರೀಕೃಷ್ಣ ಆಲನಹಳ್ಳಿಯವರ ಸಾಹಿತ್ಯ: ಮಯೂರ ಪ್ರಕಾಶನ; ಬೆಂಗಳೂರು; ೨೦೦೨

ಲಂಕೇಶ್ ಪಿ. : ಸಮಗ್ರ ಕಥೆಗಳು : ಪತ್ರಿಕೆ ಪ್ರಕಾಶನ, ಬೆಂಗಳೂರು; ೧೯೯೨

ಅನಂತಮೂರ್ತಿ ಯು. ಆರ್. : ಸಮಕ್ಷಮ : ಅನನ್ಯ ಪ್ರಕಾಶನ, ಮೈಸೂರು ; ೧೯೮೦

ದೇವಯ್ಯ ಹರವೆ : ದಲಿತ ಸಾಹಿತ್ಯ ಮತ್ತು ಇತರ ಲೇಖನಗಳು: ರಶ್ಮಿ ಉದ್ಯಮ ಕೇಂದ್ರ, ಮೈಸೂರು; ೧೯೮೨

ಎಸ್. ವೆಂಕಟರಾಮ್ : ದುಡಿಯುವವರ ದನಿ ಮತ್ತು ಇತರ ಲೇಖನಗಳು; ೧೯೮೩

ನಾಗರಾಜ ಡಿ. ಆರ್. : ಅಮೃತ ಮತ್ತು ಗರುಡ : ಪುಸ್ತಕ ಚಂದನ, ಬೆಂಗಳೂರು; ೧೯೮೩

ಶಾಂತಿನಾಥ ದೇಸಾಯಿ : ನವ ಸಾಹಿತ್ಯ ದರ್ಶನ: ಪರಿಸರ ಸಾಹಿತ್ಯ ಪ್ರಕಾಶನ,

ಶಿವಮೊಗ್ಗ; ೧೯೯೦

ಶಿವರುದ್ರಪ್ಪ ಜಿ. ಎಸ್. : ಸಾಹಿತ್ಯ ವಿಮರ್ಶೆ-೧೯೭೯; ಕರ್ನಾಟಕ ಸಾಹಿತ್ಯ

ಅಕಾಡೆಮಿ,

ಬೆಂಗಳೂರು; ೧೯೮೨

ವಿಮರ್ಶೆಯ ಪೂರ್ವ ಪಶ್ಚಿಮ; ಸಾರಸ ವಿಹಾರ, ಮೈಸೂರು

; ೧೯೬೧

ಸಾಹಿತ್ಯ ಮತ್ತು ಸಾಮಾನ್ಯ ಮನುಷ್ಯ

ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾನಿಲಯ,

ಬೆಂಗಳೂರು; ೧೯೭೭.

ಬರಗೂರು ರಾಮಚಂದ್ರಪ್ಪ : ಸಾಹಿತ್ಯ ಮತ್ತು ರಾಜಕಾರಣ; ಸಮತಾ ಪ್ರಕಾಶನ,

ಹುಬ್ಬಳ್ಳಿ : ೧೯೮೧